# ಕಾನಾಹೊಸಹಳ್ಳಿ ಹೋಬಳಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ

(೨೦೧೮-೧೯ ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಾದರಪಡಿಸಿದ ಪ್ರೌಢಪ್ರಬಂಧ)


ಸಂಶೋಧಕರು

ತಿಪ್ಪೇಸ್ವಾಮಿ ಆರ್

ನೋಂದಣಿ ಸಂಖ್ಯೆ : ೧೮೦೧೦೮೦೩೦೦೦೮





ಮಾರ್ಗದರ್ಶಕರು

ಡಾ.ಸಿ.ಎಸ್.ವಾಸುದೇವನ್

ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

೨೦೧೯

# ಕಾನಾಹೊಸಹಳ್ಳಿ ಹೋಬಳಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಪ್ರೌಢಪ್ರಬಂಧ)

ಸಂಶೋಧಕರು

**ತಿಪ್ಪೇಸ್ವಾಮಿ ಆರ್**

ನೋಂದಣಿ ಸಂಖ್ಯೆ : ೧೮೦೧೦೮೦೩೦೦೦೮

ಮಾರ್ಗದರ್ಶಕರು

**ಡಾ.ಸಿ.ಎಸ್.ವಾಸುದೇವನ್**

ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ,

ವಿದ್ಯಾರಣ್ಯ-೫೮೩ ೨೭೬

೨೦೧೯

## ಸಂಶೋಧಕರ ಪ್ರಮಾಣ ಪತ್ರ

**"ಕಾನಾಹೊಸಹಳ್ಳಿ ಹೋಬಳಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ"** ಎಂಬ ಶೀರ್ಷಿಕೆಯ ಈ ಪ್ರೌಢಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ.ಸಿ.ಎಸ್.ವಾಸುದೇವನ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಪ್ರೌಢಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Thippeswamy.R

**(ತಿಪ್ಪೇಸ್ವಾಮಿ ಆರ್)**

ಸಂಶೋಧನ ವಿದ್ಯಾರ್ಥಿ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ

ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ದಿನಾಂಕ: 20/08/2019

ಸ್ಥಳ : ವಿದ್ಯಾರಣ್ಯ

## ಮಾರ್ಗದರ್ಶಕರ ದೃಢೀಕರಣ ಪತ್ರ

**ತಿಪ್ಪೇಸ್ವಾಮಿ ಆರ್** ಅವರು **"ಕಾನಾಹೊಸಹಳ್ಳಿ ಹೋಬಳಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ"** ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರೌಢಪ್ರಬಂಧವನ್ನು ಸಲ್ಲಿಸಿರುತ್ತಾರೆ. ಪ್ರಸ್ತುತ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

C. S. Vasudevan

ಮಾರ್ಗದರ್ಶಕರು

**(ಡಾ.ಸಿಎಸ್.ವಾಸುದೇವನ್)**

ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ

ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ದಿನಾಂಕ : 13.08.2019

ಸ್ಥಳ : ವಿದ್ಯಾರಣ್ಯ

# ನಕ್ಷೆಗಳು

ಕರ್ನಾಟಕ ರಾಜ್ಯ



ಬಳ್ಳಾರಿ ಜಿಲ್ಲೆ

(ಕೃಪೆ : ಅಂತರ್ ಜಾಲ)

ಬಳ್ಳಾರಿ ಜಿಲ್ಲೆ




ಕೂಡ್ಲಿಗಿ ತಾಲೂಕು



## ಪರಿವಿಡಿ

**ಅಧ್ಯಾಯ ಒಂದು : ಪ್ರಸ್ತಾವನೆ**

೧.೧ ಅಧ್ಯಯನದ ಉದ್ದೇಶ
೧.೨ ಅಧ್ಯಯನದ ವ್ಯಾಪ್ತಿ
೧.೩ ಅಧ್ಯಯನದ ಸಮೀಕ್ಷೆ
೧.೪ ಅಧ್ಯಯನದ ಸ್ವರೂಪ
೧.೫ ಅಧ್ಯಯನದ ವಿಧಾನ

# ಅಧ್ಯಾಯ ಒಂದು

## ೧. ಪ್ರಸ್ತಾವನೆ

ಗತಕಾಲದ ಘಟನಾವಳಿಗಳನ್ನು ನಿರಂತರವಾಗಿ ಸಂಶೋಧನೆ ಮಾಡುವ ಮೂಲಕ ಇತಿಹಾಸವು ಒಂದು ರೂಪವನ್ನು ಪಡೆಯುತ್ತ ಸಾಗುವುದನ್ನು ಕಾಣಬಹುದು. ಹಾಗಾಗಿ ಪ್ರಾಚೀನ ಕಾಲದಿಂದಲೂ ಸಂಸ್ಕೃತಿಯನ್ನು ಅರ್ಥೈಸುವ ಹೊಸದನ್ನು ಕಂಡುಕೊಂಡು ತನ್ನೊಳಗೆ ಸೇರಿಸಿಕೊಳ್ಳುವ ಬದಲಾವಣೆಯಾಗುತ್ತದೆ. ಆದರೆ ಸಂಸ್ಕೃತಿ ಎಂಬುವುದು ನೈಸರ್ಗಿಕ ಪ್ರಭಾವಗಳಿಂದ ಮತ್ತು ಮಾನವನ ಕಾರ್ಯಚಟುವಟಿಕೆಗಳಿಂದ ಬೆಳವಣಿಗೆ ಹೊಂದುವುದನ್ನು ನಾವು ಕಾಣುತ್ತೇವೆ.

ಇತಿಹಾಸವು ಜೀವನಕ್ಕೆ ಹತ್ತಿರವಾದದ್ದು ಮಾನವನ ಆಲೋಚಿಸುವ ಕ್ರಮ ನಮ್ಮ ವ್ಯವಹಾರ ನಮ್ಮ ಒಂದು ತಾರ್ಕಿಕ ಚೌಕಟ್ಟು ಈ ಎಲ್ಲಾ ಅಂಶಗಳು ಹಿಂದೆ ನಡೆದದ್ದರ ಅಥವಾ ಮುಂದಿನ ಯೋಜನೆಗಳ ಮೇಲೆ ಅವಲಂಬನೆಯಾಗಿವೆ. ಹಾಗಾಗಿ ಅನೇಕ ಸಾಂಸ್ಕೃತಿಕ ಅಂಶಗಳು ಕೂಡಾ ಇತಿಹಾಸದ ಅಧ್ಯಯನಗಳಿಗೆ ಪೂರಕವಾಗಿ ಬಳಸಿಕೊಳ್ಳುವುದು ಪ್ರಸ್ತುತ ಸಂದರ್ಭದಲ್ಲಿ ಅವಶ್ಯಕತೆಯಿದೆ.

ನೈಸರ್ಗಿಕ ಪರಿಸರದ ಪ್ರಭಾವಕ್ಕೆ ಒಳಗಾಗಿರುವ ಮಾನವ ಯಾವ ರೀತಿಯಾಗಿ ನಾಗರಿಕತೆಯ ವಿವಿಧ ಹಂತಗಳನ್ನು ಮುಟ್ಟಿದನು ಎಂಬ ಅಂಶವು ಪುರಾತತ್ವ ಶೋಧನೆ ಮತ್ತು ಇತಿಹಾಸ ಅಧ್ಯಯನದಿಂದ ತಿಳಿದು ಬರುತ್ತದೆ. ಇತಿಹಾಸ ಪೂರ್ವ ಕಾಲದಲ್ಲಿ ಮಾನವನ ಜೀವನ ಚರಿತೆಯನ್ನು ತಿಳಿಯಲು ನಮಗೆ ಆಧಾರಗಳು ಸಿಗುತ್ತಿಲ್ಲ, ಆದರೆ ಆಧಾರಗಳ ಸಮಸ್ಯೆಗಳ ಕಾಣಿಸುತ್ತಿತ್ತು.

ಈ ಹಂತದಲ್ಲಿ ಮಾನವನ ಮೊದಲು ಅಲೆಮಾರಿಯಾಗಿ ಬೆಟ್ಟಗುಡ್ಡಗಳ, ಗವಿ, ಕಲ್ಲಾಸರೆ, ಕಣಿವೆ, ನದಿ, ಸರೋವರ, ಪೋಟರೆಗಳ ಸಮೀಪದಲ್ಲಿ ವಾಸಮಾಡಿಕೊಂಡು ಆಹಾರ ಹುಡುಕಾಟದಲ್ಲಿ ಮೈಗೊಡಿಸಿಕೊಂಡಿದ್ದನು. ನಂತರ ಗಡ್ಡೆ, ಗೆಣಸು, ಹಣ್ಣು, ಹಂಪಲುಗಳನ್ನು ಸೇವಿಸುತ್ತಿದ್ದ ನಂತರ ಇವನು ಬೇಟೆಗಾರಿಕೆಯನ್ನು ಕಲಿತುಕೊಂಡನು ನಂತರ ಪಶುಸಂಗೋಪನೆ ಹಾಗೂ ಕೃಷಿ ಪದ್ಧತಿಯನ್ನು ಸಹ ರೂಢಿಸಿಕೊಂಡನು. ಈ ಸಂದರ್ಭದಲ್ಲಿ ಮಾನವನ ಜೀವನಕ್ಕೆ ಬೇಕಾದಂತಹ ವಸ್ತುಗಳನ್ನು ತಯಾರಿಸಿಕೊಂಡು ಉಪಯೋಗಿಸಿ ಬಿಟ್ಟುಹೋದ ಪ್ರಾಚಾವ್ಯ ಶೇಷಗಳನ್ನು ಅನ್ವೇಷಣೆ ಮಾಡಿ ನಂತರ ಉತ್ಖನನ ಮಾಡುವುದರ ಮೂಲಕ ಅಲ್ಲಿ ಸಿಗುವ

ವಸ್ತುಗಳಿಂದ ಅಲ್ಲಿನ ಕಾಲಘಟ್ಟದ ಇತಿಹಾಸ ಮತ್ತು ಸಮಾಜ ವ್ಯವಸ್ಥೆಯ ಕಡೆಗೆ ಹೆಜ್ಜೆ ಹಾಕಿದನು. ಹೀಗೆ ಮಾನವನು ಹಂತ ಹಂತವಾಗಿ ಅಭಿವೃದ್ಧಿಯತ್ತ ನಡೆದು ಬಂದ ಚರಿತ್ರೆಯನ್ನು ಸೂಕ್ತ ರೂಪಗಳಿಂದ ಸ್ಥಳೀಯ ಇತಿಹಾಸ ತಿಳಿಯುವುದರ ಮೂಲಕ ಅಧ್ಯಯನ ನಡೆಸುವುದು ಅವಶ್ಯಕವಾಗಿದೆ.

ಮೊದಲು ರಾಜವಂಶದ ಬಗ್ಗೆ ಅವರ ಕಾಲಮಾನದ ಬಗ್ಗೆ ಯುದ್ಧದ ಬಗ್ಗೆ ಹಾಗೂ ಸಾಂಸ್ಕೃತಿಕ ಬದುಕನ್ನು ಗಮನದಲ್ಲಿಟ್ಟುಕೊಂಡು ಇತಿಹಾಸವನ್ನು ರಚಿಸುವ ಕಾಲವನ್ನು ಕಾಣಬಹುದು. ಆದರೆ ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನದ ನೆಲೆಗಳು ಸ್ಥಳೀಯ ಚರಿತ್ರೆಯ ಹಿನ್ನಲೆಯಲ್ಲಿ ವಿಸ್ತಾರಗೊಳ್ಳುತ್ತವೆ. ಈ ರೀತಿಯ ಅಧ್ಯಯನ ರೀತಿಗಳಿಂದ ಒಂದು ಪ್ರದೇಶದ ಸಾಂಸ್ಕೃತಿಕ ಮಹತ್ವವನ್ನು ವಿಸ್ತಾರಗೊಳಿಸುವುದರ ಜೊತೆಗೆ ಸ್ಥಳೀಯ ಇತಿಹಾಸವನ್ನು ಗುರುತಿಸುವಲ್ಲಿ ಚರಿತ್ರೆಯ ಅಧ್ಯಯನ ಬಹಳ ಮುಖ್ಯವಾಗಿದೆ. ಆದರಿಂದ **'ಕಾನಾಹೊಸಹಳ್ಳಿ ಹೋಬಳಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ'** ಎಂಬ ಶಿರ್ಷಿಕೆ ಅಡಿಯಲ್ಲಿ ಸ್ಥಳೀಯವಾಗಿ ಹಾಗೂ ಪ್ರಾದೇಶಿಕ ಮಟ್ಟದಲ್ಲಿ, ಗ್ರಾಮಮಟ್ಟದಲ್ಲಿ ಇಂತಹ ಸಮಗ್ರ ಮತ್ತು ಸೂಕ್ಷ್ಮ ಅಧ್ಯಯನಗಳನ್ನು ನಡೆಸುವುದರ ಮೂಲಕ ಮಾನವನ ಚಟುವಟಿಕೆಗಳು ಆತನ ಜೀವನ ಪದ್ಧತಿ, ಸಂಸ್ಕೃತಿ, ದೇವಾಲಯಗಳು, ಕೆರೆಕಟ್ಟೆಗಳು, ಕೋಟೆಕೊತ್ತಲುಗಳು ಹಾಗೂ ಸ್ಮಾರಕಗಳು ಜೊತಗೆ ಮೌಖಿಕ ಆಕರಗಳನ್ನು ಕಲೆಹಾಕುವ ಮೂಲಕ ಪುರಾತತ್ವೀಯ ಹಾಗೂ ಸಾಂಸ್ಕೃತಿಕ ಅಧ್ಯಯನ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಕಾನಾಹೊಸಹಳ್ಳಿ ಹೋಬಳಿ ಪರಿಸರ ಪ್ರಸ್ತುತ ಅಧ್ಯಯನದ ಪ್ರದೇಶವು ನೊಳಂಬವಾಡಿಯ ಕೋಗಳಿನಾಡು-೫೦೦ ವಿಭಾಗಕ್ಕೆ ಒಳಪಟ್ಟಿರುವ ಕೂಡ್ಲಗಿ ತಾಲ್ಲೂಕಿನಲ್ಲಿದೆ.

### ೧.೧ ಅಧ್ಯಯನದ ಉದ್ದೇಶ

ಪ್ರಾಚೀನ ಸ್ಮಾರಕಗಳು ಮತ್ತು ಪ್ರಾಚ್ಯವಶೇಷಗಳು ಸಾಂಸ್ಕೃತಿಕ ಹಿನ್ನಲೆಯನ್ನು ಹೊಂದಿದ್ದು ಅವುಗಳ ಅಧ್ಯಯನವು ಇತಿಹಾಸದ ಪುನರ ನಿರ್ಮಾಣಕ್ಕೆ ಪ್ರಮುಖ ದತ್ತಾಂಶವಾಗಿವೆ. ಈ ತರಹದ ಆಕರಗಳಿಂದ ಪ್ರಾಚೀನ ಅವಶೇಷಗಳನ್ನು ಒಳಗೊಂಡಿರುವ ಕಾನಾಹೊಸಹಳ್ಳಿ ಹೋಬಳಿ ಪರಿಸರದ ಕುರಿತು ಸಮಗ್ರವಾಗಿ ಸಂಶೋಧನಾತ್ಮಕ ಅಧ್ಯಯನಗಳು ನಡೆದಿಲ್ಲ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳಲಾಗಿದೆ. ಇದುವರೆಗೆ ನಡೆದ ಅಧ್ಯಯನ ಸಮೀಕ್ಷೆ ಮೂಲಕ ಕಂಡುಕೊಂಡ ಸಂಪೂರ್ಣ ಮಾಹಿತಿಯ ಕೊರತೆ ನೀಗಿಸಲು ಕಾನಾಹೊಸಹಳ್ಳಿ ಹೋಬಳಿ

ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಕಾರ್ಯಕ್ಕೆ ಮುಂದಾಗಿರುವುದು ಇಲ್ಲಿನ ಪ್ರಮುಖ ಉದ್ದೇಶವಾಗಿದೆ.

ಕಾನಾಹೊಸಹಳ್ಳಿ ಹೋಬಳಿ ಪರಿಸರ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಸ್ಥಳಗಳಿಗೆ ಪ್ರತ್ಯಕ್ಷವಾಗಿ ಭೇಟಿ ನೀಡಿ ಅಧ್ಯಯನಕ್ಕೆ ಪೂರಕವಾದ ಪ್ರಮುಖ ಅಂಶಗಳನ್ನು ಸಂಗ್ರಹಿಸಿ ಅವುಗಳನ್ನು ಪಟ್ಟಿಮಾಡಿ ಸ್ಥೂಲವಾಗಿ ಅಧ್ಯಯನಕ್ಕೆ ಒಳಪಡಿಸಿ ವೈಜ್ಞಾನಿಕ, ವೈಚಾರಿಕ, ಸತ್ಯಸತ್ಯತೆಯನ್ನು ಕಂಡುಕೊಳ್ಳುವುದು ಹಾಗೂ ಸ್ಥಳೀಯ ಜನರಲ್ಲಿನ ಅಭಿಪ್ರಾಯ ಕಾನಾಹೊಸಹಳ್ಳಿ ಹೋಬಳಿ ಪರಿಸರದ ವ್ಯಾಪ್ತಿಯಲ್ಲಿ ಬರುವ ಐತಿಹ್ಯಗಳು, ಸ್ಥಳ ಪುರಾಣ, ಸ್ಥಳನಾಮಗಳ ಬಗ್ಗೆ ವಿಶ್ಲೇಷಣೆ ಮಾಡುವುದು ಮೂಲ ಉದ್ದೇಶವಾಗಿದೆ.

ಇಲ್ಲಿನ ಪ್ರಾಚ್ಯವಶೇಷಗಳು ಇತಿಹಾಸ ಪುನರ ನಿರ್ಮಾಣಕ್ಕೆ ನೆರವಾಗುವುದರಿಂದ ಅವುಗಳ ಮಹತ್ವ ಸ್ಥಳೀಯ ಜನರಿಗೆ ತಿಳಿಸುವ ಜೊತೆಗೆ ಅವುಗಳ ಸಂರಕ್ಷಣೆಗೆ ಜನರನ್ನು ಜಾಗೃತಗೊಳಿಸುವ ಕೆಲಸ ಈ ಅಧ್ಯಯನದ ನಿಟ್ಟಿನಲ್ಲಿ ಮಹತ್ವದೆನಿಸಿದೆ. ಸಮಗ್ರ ಕರ್ನಾಟಕ ಇತಿಹಾಸ ಮತ್ತು ಪುರಾತತ್ವದ ಪ್ರಾಚ್ಯವಶೇಷಗಳ ಅಧ್ಯಯನದ ವಿಭಾಗದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಕಾನಾಹೊಸಹಳ್ಳಿ ಹೋಬಳಿ ಪರಿಸರವನ್ನು ವಿವರಣಾತ್ಮಕವಾಗಿ ಮತ್ತು ವಿಶ್ಲೇಷಣಾತ್ಮಕವಾಗಿ ಅಧ್ಯಯನಕ್ಕೆ ಒಳಪಡಿಸುವ ಮೂಲಕ ಚರಿತ್ರೆಯನ್ನು ನಿರ್ಮಿಸಿಕೊಡುವ ಪ್ರಾಚ್ಯ ನೆಲೆಗಳನ್ನು ಕಂಡುಕೊಳ್ಳುವ, ಅರಸುಮನೆತನಗಳು, ಸ್ಮಾರಕಗಳು, ಶಿಲ್ಪಗಳು, ದೇವಾಲಯಗಳು, ಪ್ರಾಗೈತಿಹಾಸಿಕ ನೆಲೆಗಳನ್ನು ಕುರಿತು ಅಧ್ಯಯನ ಮಾಡುವ ಧ್ಯೇಯೊದ್ದೇಶದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

### ೧.೨ ಅಧ್ಯಯನದ ವ್ಯಾಪ್ತಿ

ವ್ಯಾಪ್ತಿ ಎಂದರೆ ಎಲ್ಲೇ ಅಥವಾ ಮೇರೆ ಎಂದರ್ಥ ಸೂಚಿಸುತ್ತದೆ. ನಿರ್ದಿಷ್ಟವಾಗಿ ಯಾವುದೇ ಒಂದು ಸಂಶೋಧನೆ ಯಶ್ವಸಿಯಾಗಬೇಕಾದರೆ ಅದಕ್ಕೆ ತನ್ನದೇ ಆದ ವ್ಯಾಪ್ತಿ ಚೌಕಟ್ಟು ಇರಬೇಕಾದುದ್ದು ಅತಿ ಮುಖ್ಯವಾಗಿದೆ. ಪ್ರಸ್ತುತ ಅಧ್ಯಯನವು ಶಿರ್ಷಿಕೆ ಸೂಚಿಸುವಂತೆ ಕಾನಾಹೊಸಹಳ್ಳಿ ಹೋಬಳಿ ಪರಿಸರಕ್ಕೆ ಮಾತ್ರವೇ ಸೀಮಿತವಾಗಿದೆ. ಆದರೂ ಸಹ ಅವಶ್ಯಕತೆಗೆ ಅನುಗುಣವಾಗಿ ಈ ಪ್ರದೇಶಕ್ಕೆ ಸಂಬಂಧಿಸಿದ ಕೆಲವು ಪ್ರಮುಖ ಸ್ಥಳಗಳನ್ನು ಪ್ರಾಸಂಗಿಕವಾಗಿ ಅಧ್ಯಯನಿಸಲಾಗಿದೆ. ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ೨೩ ಹಳ್ಳಿ(ಗ್ರಾಮ)ಗಳಿದ್ದು ಅವುಗಳಲ್ಲಿ ಇತಿಹಾಸ ಮತ್ತು ಪುರಾತತ್ವೀಯ ಅಂಶಗಳನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಕಾನಾಹೊಸಹಳ್ಳಿ ಹೋಬಳಿ ಪರಿಸರದ ಸುತ್ತಮುತ್ತ ಪ್ರಾಗಿತಿಹಾಸ ಕಾಲದಿಂದಲೂ ಮಾನವನ ವಸತಿ ತಾಣಗಳಿದ್ದು ಇತಿಹಾಸ ಕಾಲದ ಆರಂಭದಿಂದ ವಿಜಯನಗರ ಮತ್ತು ವಿಜಯನಗರೋತ್ತರ ಮತ್ತು ಪಾಳೆಯಗಾರರನ್ನು ಒಳಗೊಂಡಂತೆ ಅನೇಕ ದೇವಾಲಯಗಳು, ಶಾಸನಗಳು, ಕೋಟೆಕೊತ್ತಲು ಮುಂತಾದ ಸ್ಮಾರಕ ಅವಶೇಷಗಳು ಕಂಡುಬರುತ್ತವೆ. ಇವುಗಳನ್ನು ಕಾಲಮಾನದ ಚೌಕಟ್ಟಿನಲ್ಲಿ ಸಾಂದರ್ಭಿಕ ವಿಷಯಗಳಿಗೆ ಅಣುಗುಣವಾಗಿ ಪುರಾತತ್ವೀಯ ಅಂಶಗಳಿಗೆ ಅನ್ವಯಿಸಿಕೊಂಡು ಕಾನಾಹೊಸಹಳ್ಳಿ ಹೋಬಳಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಮಾಡಲಾಗಿದೆ.

**೧.೩ ಅಧ್ಯಯನದ ಸಮೀಕ್ಷೆ**

ಈವರೆಗೆ ಅಧ್ಯಯನಗಳು ಕಾನಾಹೊಸಹಳ್ಳಿ ಹೋಬಳಿ ಪರಿಸರವನ್ನು ಒಳಗೊಂಡತೆ ಕೂಡ್ಲಿಗಿ ತಾಲ್ಲೂಕಿನ ಬಗ್ಗೆ ಪೂರ್ಣ ಪ್ರಮಾಣದಲ್ಲಿ ವ್ಯವಸ್ಥಿತ ಅಧ್ಯಯನಗಳು ನಡೆದು ಬಂದಿರುವುದು ತೀರಾ ವಿರಳ ಆದರೆ ಈ ಪರಿಸರದ ಕುರಿತಾಗಿ ಕೆಲವು ವಿಚಾರಗಳ ಬಗ್ಗೆ ಬಿಡಿ ಬಿಡಿಯಾಗಿ ಅಲ್ಲಲ್ಲಿ ನಡೆದಿರುವ ಅಧ್ಯಯನಗಳು ಕಾಣಬಹುದು ಅವು ಈ ಕೆಳಗಿನಂತಿವೆ.

ಚಂದ್ರಶೇಖರಯ್ಯ ಬಿ.ಎಂ. ಅವರು ೧೯೮೮ರಲ್ಲಿ "ಕೂಡ್ಲಗಿ ತಾಲೂಕು ದರ್ಶನ" ಎಂಬ ಗ್ರಂಥದಲ್ಲಿ ಈ ತಾಲೂಕಿನ ಭೌಗೋಳಿಕತೆ ಮತ್ತು ಇಲ್ಲಿನ ಪ್ರೇಕ್ಷಣಿಯ ಸ್ಥಳಗಳನ್ನು ಕುರಿತು ಸಂಕ್ಷಿಪ್ತ ಮಾಹಿತಿಯನ್ನು ನೀಡಿದ್ದಾರೆ. ತಿಪ್ಪೇಸ್ವಾಮಿ ಹೆಚ್. ಇವರು ತಮ್ಮ ಲೇಖನವಾದ "ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು" ಎಂಬುವುದರಲ್ಲಿ ತಾಲೂಕಿನಲ್ಲಿ ಕಂಡುಬರುವ ಶಿಲಾಗೋರಿಗಳನ್ನು ಪತ್ತೆಹಚ್ಚಿ ಅವು ಭಾರತದಲ್ಲಿಯೇ ದೊರೆತಂತಹ ಅಪರೂಪದ ಮಾನವಾಕೃತಿಗಳೆಂದು ಹಾಗೂ ಅವುಗಳ ಬಗ್ಗೆ ಇರುವ ಐತಿಹ್ಯಗಳನ್ನು ಮತ್ತು ಮೌಖಿಕ ಕಥನವನ್ನು ವಿವರಿಸಿದ್ದಾರೆ. ಲೊಕೇಶ ಜಿ.ಎಂ ಅವರು ಚಿನ್ನಹಗರಿ ಪರಿಸರದ ಚಾರಿತ್ರಿಕ ಅಧ್ಯಯನ ಎಂಬ ವಿಷಯವನ್ನು ಕುರಿತು ಸಂಶೋಧನೆ ಕೈಗೊಂಡು ಎಂ.ಫಿಲ್ ಸಂಪ್ರಬಂಧವನ್ನು ತಯಾರಿಸಿದ್ದಾರೆ.

ಕೊಟ್ರೇಶ ಎಂ ಇವರು ೨೦೧೧ರಲ್ಲಿ ಬರೆದ 'ಬಳ್ಳಾರಿ ಜಿಲ್ಲೆಯ ಕೋಟೆಗಳು' ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲೂಕಿನ ಚಾರಿತ್ರಿಕ ಕಾಲಘಟ್ಟದ ಕೋಟೆಗಳ ಬಗ್ಗೆ ವಿವರಣೆ ನೀಡಿರುತ್ತಾರೆ. ಫೂಟ್ ಆರ್.ಬಿ ಇವರು ೧೯೧೯ರಲ್ಲಿ "ಮದ್ರಾಸ ಇಂಡಿಯನ್ ಪ್ರಿ ಹಿಸ್ಟಾರಿಕ ಅಂಡ ಪ್ರೋಟೊ ಹಿಸ್ಟಾರಿಕ ಆಂಟಿಕ್ವಿಟಿಸ್" ಎಂಬ ವರದಿಯಲ್ಲಿ ಕೂಡ್ಲಿಗಿ ತಾಲೂಕಿನ ಪೂರ್ವ ಇತಿಹಾಸ

ಕುರಿತಂತೆ ಕೆಲವು ಸ್ಥಳಗಳನ್ನು ನವಶಿಲಾಯುಗದ ನೆಲೆಗಳೆಂದು ಗುರುತಿಸಿದ್ದಾರೆ. ರವಿಕುಮಾರ ಎನ್.ಎಂ ಮತ್ತು ವೃಷಭೇಂದ್ರಚಾರ್ಯ ಅವರು 'ಮುನ್ನಡೆಯ ಕೂಡ್ಲಿಗಿ" ಎಂಬ ಕೃತಿಯಲ್ಲಿ ಈ ತಾಲ್ಲೂಕಿನ ಅಂಕಿಅಂಶಗಳ ಮಾಹಿತಿ, ಶಾಸನಗಳ ಸಮೀಕ್ಷೆ ಮತ್ತು ಇತ್ಯಾದಿ ವಿವರಗಳನ್ನು ನೀಡಿರುತ್ತಾರೆ.

ಸೋಮಶೇಖರ ಎಸ್.ವೈ, ಸುರೇಶ ಎಂ, ವಾಸುದೇವ ಬಡಿಗೇರ, ಕೊಟ್ರೇಶ ಎಂ ಅವರು ೧೯೯೯ರಲ್ಲಿ 'ಕರ್ನಾಟಕ ದೇವಾಲಯ ಕೋಶ ಬಳ್ಳಾರಿ ಜಿಲ್ಲೆ' ಈ ಕೃತಿಯಲ್ಲಿ ಕೂಡ್ಲಿಗಿ ತಾಲೂಕಿನ ದೇವಾಲಯಗಳನ್ನು ಕುರಿತಂತೆ ವಿವರಿಸಿದ್ದಾರೆ. ವಿರೂಪಾಕ್ಷಿ ಪೂಜಾರಹಳ್ಳಿಯವರು 'ಚಿನ್ನಹಗರಿಸಿರಿ' ಎಂಬ ಕೃತಿಯನ್ನು ೨೦೦೯ರಲ್ಲಿ ಪ್ರಕಟಿಸಿ ಅದರಲ್ಲಿ ಚಿನ್ನಹಗರಿ ನದಿ ಪರಿಸರದ ಭೌಗೋಳಿಕ ಪರಿಸರ ಮತ್ತು ಈ ನದಿದಂಡೆಯಲ್ಲಿ ದೊರೆತಿರುವ ಪ್ರಾಚ್ಯವಶೇಷಗಳನ್ನು ಕುರಿತಂತೆ ವಿವರಿಸಿದ್ದಾರೆ. ವಾಸುದೇವ ಬಡಿಗೇರ ಅವರು ೨೦೧೨ರಲ್ಲಿ 'ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ' ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲೂಕಿನ ದೇವಾಲಯಗಳನ್ನು ಮತ್ತು ಇತರೆ ಅವಶೇಷಗಳನ್ನು ಕುರಿತಂತೆ ಚರ್ಚಿಸಿದ್ದಾರೆ.

ಭೀಮಣ್ಣ ಗಜಾಪುರ ಇವರು 'ಕನಸುಗಳಿಗೆ ರೆಕ್ಕೆಕಟ್ಟದವರು' ಎಂಬ ಪತ್ರಿಕಾ ವರದಿಯ ಲೇಖನಗಳನ್ನು ಸಂಗ್ರಹಿಸಿ ಪುಸ್ತಕವನ್ನು ಪ್ರಕಟಿಸಿದ್ದಾರೆ. ಕರಿಬಸಪ್ಪ.ಎ ಇವರು ೨೦೦೩ರಲ್ಲಿ "ಬಳ್ಳಾರಿ ಜಿಲ್ಲೆಯ ಐತಿಹ್ಯಗಳು" ಎಂಬ ಮಹಾಪ್ರಬಂಧದಲ್ಲಿ ಕೂಡ್ಲಿಗಿ ತಾಲ್ಲೂಕಿನ ಕೆಲವು ಐತಿಹ್ಯಗಳನ್ನು ವಿವರಿಸುತ್ತಾರೆ. ಭೀಮಸಮುದ್ರ ರಂಗನಾಥ ಇವರು "ಕೂಡ್ಲಿಗಿ ತಾಲೂಕಿನ ಪುರಾತತ್ವ ನೆಲೆಗಳು" (ಅಪ್ರಕಟಿತ ಕೃತಿ) ಮತ್ತು ತಿಪ್ಪೇಶ ಹೆಚ್.ಎಂ. ಇವರು ಕೂಡ್ಲಗಿ ತಾಲೂಕಿನ ಬೃಹತ್ ಶಿಲಾಯುಗದ ನೆಲೆಗಳು ಎಂಬ ವಿಷಯದ ಕುರಿತು ಎಂ.ಫಿಲ್ ಪದವಿಯನ್ನು ಮಾಡಿದ್ದಾರೆ. ನಾಗಯ್ಯ ಜೆ.ಎಂ ಅವರು ೨೦೦೨ರಲ್ಲಿ 'ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ' ಕೃತಿಯಲ್ಲಿ ಈ ಜಿಲ್ಲೆಯನ್ನು ಆಳ್ವಿಕೆ ಮಾಡಿದ ರಾಜರು, ಮಹಾಮಂಡಳೇಶ್ವರರು, ಸಾಮಂತರು ಮತ್ತು ನಾಯಕರನ್ನು ಕುರಿತು ತಿಳಿಸಿದ್ದಾರೆ.

ರವೀಂದ್ರನಾಥ ಕೆ. ಅವರು ೨೦೦೫ರಲ್ಲಿ "ಬಳ್ಳಾರಿ ಜಿಲ್ಲಾ ದರ್ಶನ" ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಲೋಕೇಶರವರು "ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯ ಕುರಿತು ಎಂ.ಫಿಲ್ ನಿಬಂಧ ರಚಿಸಿದ್ದಾರೆ. ವಿರೇಂದ್ರ ಪಾಟೀಲ್ ಕೆ.ಜಿ ಕಾನಾಹೊಸಹಳ್ಳಿ ಎಂಬ ಲೇಖನದಲ್ಲಿ ಕಾನಾಹೊಸಹಳ್ಳಿ ಸಾಂಸ್ಕೃತಿಕ ಆಚರಣೆಗಳನ್ನು ಕುರಿತು ತಿಳಿಸಿದ್ದಾರೆ. ವಿರೂಪಾಕ್ಷಪ್ಪ ಎಂ. ಇವರು ೨೦೧೮ರಲ್ಲಿ ಕಾನಾಹೊಸಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನ

ಎಂಬ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ಸಲ್ಲಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿರುವ ಶಾಸನ ಸಂಪುಟ ೧ ಬಳ್ಳಾರಿ ಜಿಲ್ಲೆ ಇದರಲ್ಲಿ ನನ್ನ ಅಧ್ಯಯನ ವ್ಯಾಪ್ತಿಗೆ ಸಂಬಂಧಿಸಿದಂತೆ ಒಂದು ಶಾಸನ ಉಲ್ಲೇಖಿಸಿದ್ದಾರೆ. ಮತ್ತು ಸಂಪುಟ-೩ರಲ್ಲಿ ಈ ಹೋಬಳಿಗೆ ಸಂಬಂಧಪಟ್ಟಂತೆ ಒಂದು ಶಾಸನವನ್ನು ಉಲ್ಲೇಖಿಸಿದ್ದಾರೆ. ಸಿ.ಎಸ್ ವಾಸುದೇವನ್ ಅವರು "ಹಂಪಿ ಪರಿಸರದ ಕೆರೆಗಳು" ಇದರಲ್ಲಿ ಕುಮತಿ ಮತ್ತು ಹುಲಿಕುಂಟೆ ಕೆರೆಗಳ ವಿವರ ನೀಡಿದ್ದಾರೆ.

ಹೀಗೆ ಇದುವರೆಗಿನ ಅಧ್ಯಯನಗಳನ್ನು ಗಮನಿಸಿದರೆ ಬಳ್ಳಾರಿ ಜಿಲ್ಲೆ ಮತ್ತು ಕೂಡ್ಲಗಿ ತಾಲೂಕಿಗೆ ಸಂಬಂದಪಟ್ಟಂತೆ ಅಧ್ಯಯನಗಳು, ಲೇಖನಗಳು, ಕೃತಿಗಳು, ಗ್ರಂಥಗಳು, ಪತ್ರಿಕಾ ವರದಿಗಳು ಪ್ರಕಟವಾಗಿದ್ದರೂ ಅವು ನಿರ್ದಿಷ್ಟ ಒಂದು ವಿಷಯವನ್ನು ಅಥವಾ ಒಂದು ಸ್ಥಳವನ್ನು ಕುರಿತು ಚರ್ಚಿಸಿವೆ. ಹೀಗೆ ಬಳ್ಳಾರಿ ಜಿಲ್ಲೆ ಮತ್ತು ಕೂಡ್ಲಗಿ ತಾಲೂಕನ್ನು ಗಮನದಲ್ಲಿರಿಸಿಕೊಂಡು ಕಾನಾಹೊಸಹಳ್ಳಿ ಹೋಬಳಿಯ ಬಗ್ಗೆ ದೊರೆತಿರುವ ಎಲ್ಲಾ ಆಕರಗಳನ್ನು ಬಳಸಿಕೊಂಡು 'ಕಾನಾಹೊಸಹಳ್ಳಿ ಹೋಬಳಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ' ಎಂಬ ಶೀರ್ಷಿಕೆಯಡಿಯಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ೧.೪ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನದ ಉದ್ದೇಶ, ವ್ಯಾಪ್ತಿ ಅಂಶಗಳ ಹಿನ್ನಲೆಯಲ್ಲಿ ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದೆ. ಮೊದಲನೆಯ ಅಧ್ಯಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ಸ್ವರೂಪ, ವಿಧಾನವನ್ನು ಸ್ಪಷ್ಟಪಡಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕಾನಾಹೊಸಹಳ್ಳಿ ಹೋಬಳಿ ಪರಿಸರದ ಭೌಗೋಳಿಕ ಅಂಶಗಳಾದ ಭೂ ವಿಸ್ತೀರ್ಣ, ಹವಾಗುಣ, ಜನಸಂಖ್ಯೆ, ಜಲಸಂಪತ್ತು, ನೀರಾವರಿ ವ್ಯವಸ್ಥೆ, ಬೆಟ್ಟಗುಡ್ಡಗಳು ಮುಂತಾದ ವಿಷಯಗಳನ್ನು ಬಳಸಿಕೊಳ್ಳಲಾಗಿದೆ. ಅಲ್ಲದೇ ಕಾನಾಹೊಸಹಳ್ಳಿ ಹೋಬಳಿಯ ಸ್ಥಳನಾಮ ಮತ್ತು ಐತಿಹ್ಯ ಕುರಿತು ವಿವರಿಸಲಾಗಿದೆ. ಹಾಗೂ ಈ ಹೋಬಳಿಯ ಪ್ರಾಗೈತಿಹಾಸಿಕ ನೆಲೆಗಳನ್ನು ಗುರುತಿಸಲಾಗಿದೆ. ಚಾರಿತ್ರಿಕ ಹಿನ್ನಲೆಯಲ್ಲಿ ಅಲ್ಲಿನ ರಾಜಕೀಯ ಅಂಶಗಳನ್ನು ತಿಳಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿರುವ ದೇವಾಲಯಗಳು, ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಗಳ ರಚನೆ, ವಿನ್ಯಾಸ, ಆಚರಣೆ ಅವುಗಳ

ಸಾಂಸ್ಕೃತಿಕ ಹಿನ್ನಲೆಯಲ್ಲಿ ತಿಳಿಸಲಾಗಿದೆ. ರಕ್ಷಣಾ ವಾಸ್ತುಶಿಲ್ಪಗಳ ಹಿನ್ನೆಲೆಯಲ್ಲಿ ಕೋಟೆ-ಕೊತ್ತಲುಗಳು, ಬುರುಜುಗಳು, ಹುಡೇವುಗಳು ಹಾಗೂ ಕೆಲವೊಂದು ಪ್ರಾಚೀನ ಕೆರೆ-ಬಾವಿಗಳನ್ನು ಗುರುತಿಸಲಾಗಿದೆ. ಸ್ಮಾರಕ ಶಿಲ್ಪಗಳ ಹಿನ್ನಲೆಯಲ್ಲಿ ವೀರಗಲ್ಲುಗಳು, ಮಹಾಸತಿಗಲ್ಲು, ತುರುಗೋಳ್ ವೀರಗಲ್ಲು, ವೀರಮಹಾಸತಿಗಲ್ಲುಗಳ ರಚನೆ ಆಚರಣೆ, ಐತಿಹ್ಯಗಳನ್ನು ವಿವರಿಸಲಾಗುತ್ತದೆ.

ನಾಲ್ಕನೆಯ ಅಧ್ಯಾಯದಲ್ಲಿ ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ದೊರೆಯುವ ಶಾಸನಗಳನ್ನು ದಾಖಲಿಸುವುದು ಮತ್ತು ಅವುಗಳ ಮಹತ್ವವನ್ನು ತಿಳಿಯುವುದು.

ಐದನೆಯ ಅಧ್ಯಾಯವೂ ಸಮರೋಪವಾಗಿದ್ದು ಇದು ಇಡೀ ಅಧ್ಯಯನದಲ್ಲಿ ಕಂಡುಬಂದ ಒಟ್ಟಾರೆ ಸಂಶೋಧನೆಯ ಫಲಿತಾಂಶವನ್ನು ಒಳಗೊಂಡಿದೆ. ಅದರೊಂದಿಗೆ ಇಡೀ ಅಧ್ಯಾಯಗಳ ಸಂಕ್ಷೀಪ್ತ ರೂಪವನ್ನು ಈ ಅಧ್ಯಾಯದಲ್ಲಿ ಸ್ಪಷ್ಟಿಪಡಿಸಲಾಗಿದೆ.

**೧.೫ ಅಧ್ಯಯನದ ವಿಧಾನ**

ಒಂದು ಕಾರ್ಯ ಯಶ್ವಸಿಯಾಗ ಬೇಕಾದರೆ ಕ್ರಮಬದ್ಧತೆ ಅತೀ ಮುಖ್ಯವಾಗುತ್ತದೆ. ಅದಕ್ಕಾಗಿ ಸಂಶೋಧನಾ ಕಾರ್ಯಕ್ಕೂ ವ್ಯವಸ್ಥಿತ ಅಧ್ಯಯನ ಬಹಳ ಅವಶ್ಯಕವಾಗಿದ್ದು, ಮುಖ್ಯವಾಗಿ ಇಲ್ಲಿ ಇತಿಹಾಸ ಮತ್ತು ಪುರಾತತ್ವ ಅಧ್ಯಯನದ ಹಿನ್ನಲೆಯನ್ನು ಇಟ್ಟುಕೊಂಡು ಕೈಗೊಂಡಿರುವ ಪ್ರಸ್ತುತ ಕ್ಷೇತ್ರಕಾರ್ಯ ಆಧಾರಿತ ಅಂಶದಿಂದ ಕೂಡಿದ್ದು, ಅಧ್ಯಯನದ ವ್ಯಾಪ್ತಿಗೆ ಒಳಪಡುವ ಪ್ರತಿಯೊಂದು ಗ್ರಾಮ ಅಥವಾ ಪ್ರದೇಶಗಳಿಗೆ ನೇರವಾಗಿ ಭೇಟಿ ನೀಡಿ ದೊರೆಯುವ ಸಂಪನ್ಮೂಲ, ಅವಶೇಷಗಳನ್ನು ಅವಲೋಕಿಸಿ ಪರಮರ್ಶಿಸಿ ಎಲ್ಲಾ ಬಗೆಯ ಸರ್ಕಾರಿ ಕಾಗದಪತ್ರಗಳು, ಲೇಖನಗಳು, ನಿಯತಕಾಲಿಕೆಗಳು, ಸಂಶೋಧನಾ ಲೇಖನಗಳು ಹಾಗೂ ಪಿ.ಹೆಚ್.ಡಿ, ಎಂ.ಫಿಲ್ ಪ್ರಬಂಧಗಳನ್ನು ಆಧರಿಸಿ ಅವಶ್ಯವಾಗಿ ಅಂಶಗಳನ್ನು ವಿಷಯನುಸಾರ ವಿಮರ್ಶಿಸಿ, ವಿಶ್ಲೇಷಿಸಿ, ಸಂಯೋಜಿಸಿ ದಾಖಲಿಸಲಾಗಿದೆ. ಪ್ರಾಥಮಿಕ ಮತ್ತು ಅನುಷಂಗಿಕ ಆಕರಗಳನ್ನು ಸಮಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ, ವೈಜ್ಞಾನಿಕವಾಗಿ ಮತ್ತು ವಸ್ತುನಿಷ್ಟವಾದ ವಿಧಾನಗಳನ್ನು ಈ ಸಂಪ್ರಬಂಧದ ರಚನೆಯಲ್ಲಿ ಪ್ರಾಮಾಣಿಕವಾಗಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಗ್ರಂಥಋಣ, ನಕ್ಷೆಗಳು, ಚಾಯಾಚಿತ್ರಗಳ ವಿವರಗಳನ್ನು ನೀಡಲಾಗಿದೆ.

**ಅಧ್ಯಾಯ ಎರಡು : ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನೆಲೆ**

೨.೧ ಭೌಗೋಳಿಕ ಪರಿಸರ

೨.೨ ಸ್ಥಳನಾಮ

೨.೩ ಪ್ರಾಗಿತಿಹಾಸ

೨.೪ ರಾಜಕೀಯ ಇತಿಹಾಸ

# ಅಧ್ಯಾಯ ಎರಡು :

## ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನಲೆ

ಒಂದು ಸ್ಥಳ ಅಥವಾ ಪ್ರದೇಶದ ಸಂಸ್ಕೃತಿಯ ವಿಕಾಸ ಮತ್ತು ಭೌಗೋಳಿಕ ಹಿನ್ನಲೆಗಳ ನಡುವೆ ಪರಸ್ಪರ ಸಂಬಂಧವಿದೆ. ಭೌಗೋಳಿಕ ಹಿನ್ನಲೆ ಪ್ರಕೃತಿಯ ಕೊಡುಗೆ. ಪ್ರಕೃತಿಯ ಅಸ್ತಿತ್ವ ಮೊದಲು ಆನಂತರ ಅದರಲ್ಲಿ ಮಾನವನ ಪ್ರವೇಶ. ಮಾನವನಿಗೆ ಪ್ರಕೃತಿ ಅಪಾರ ಸಂಪನ್ಮೂಲಗಳನ್ನು ನೀಡಿದೆ. ಅವುಗಳನ್ನು ತನ್ನ ಅನುಕೂಲಕ್ಕೆ ಬಳಕೆ ಮಾಡಿಕೊಳ್ಳುವ ಅಥವಾ ಪ್ರಕೃತಿಗೆ ಹೊಂದಿಕೊಂಡು ಬದುಕುವಲ್ಲಿ ಮನುಷ್ಯ ತನ್ನ ಶ್ರಮ ಮತ್ತು ಬುದ್ಧಿವಂತಿಕೆಯನ್ನು ಬಳಸುವನು ತನ್ಮೂಲಕ ಮಾನವ ಸ್ವತಃ ಪರಿಸರವನ್ನು ರೂಪಿಸಿಕೊಳ್ಳುವುದೇ ಸಂಸ್ಕೃತಿ.

ಒಂದು ನಿರ್ದಿಷ್ಟ ಪ್ರದೇಶದ ಅಧ್ಯಯನದಲ್ಲಿ ಭೌಗೋಳಿಕ ಹಿನ್ನಲೆಯಲ್ಲಿ ಆ ಪ್ರದೇಶ ಸ್ಥಳದ ಸನ್ನಿವೇಶ ಭೂಸ್ವರೂಪಗಳ ಬೆಟ್ಟ, ಗುಡ್ಡ, ಮೈದಾನ, ಜಲರಾಶಿ, ಸಸ್ಯ ಮತ್ತು ಪ್ರಾಣಿವರ್ಗ, ಜನವ್ಯವಸ್ಥೆ ಮಣ್ಣು ಹಾಗೂ ಫಲವತ್ತತೆ ಅರಣ್ಯ ಸಂಪತ್ತು ಪ್ರಾಣಿಸಂಪತ್ತು ಇತ್ಯಾದಿಗಳನ್ನು ಒಳಗೊಂಡಿದೆ. ಇವುಗಳಲ್ಲಿ ಪರ್ವತ ಶಿಖರಗಳ ಬೆಟ್ಟಗಳ ಸರಣಿ ಸಂಸ್ಕೃತಿ ಸಂಪ್ರದಾಯದ ಪ್ರತಿಕವಾಗಿ ಪವಿತ್ರ ಯಾತ್ರಸ್ಥಳ ಅಥವಾ ದೇವಾಲಯಗಳನ್ನು ಕಾಣಬಹುದು. ಪ್ರಪಂಚದ ಪ್ರಸಿದ್ಧ ಪ್ರಧಾನ ನಾಗರಿಕತೆಗಳ ಹಲವು ನದಿಗಳ ಬಯಲಿನಲ್ಲಿ ವಿಕಾಸಗೊಂಡಿರುವುದಕ್ಕೆ ನಿದರ್ಶನಗಳಿವೆ. ಮಾನವನ ಬದುಕಿನ ಮೇಲೆ ಭೌಗೋಳಿಕ ಅಂಶಗಳು ಗಾಢವಾದ ಪ್ರಭಾವ ಬೀರುತ್ತವೆ. ಆದಿ ಮಾನವ ಬದುಕುವುದಕ್ಕಾಗಿ ಅನೂಕೂಲಕರ ಭೌಗೋಳಿಕ ಪರಿಸರವನ್ನು ಶೋಧಿಸಿ ಅಲ್ಲಿ ನೆಲೆಯುರುತ್ತಿದ್ದು, ಆಯಾ ಭೌಗೋಳಿಕ ಹಿನ್ನೆಲೆಗಳಿಗೆ ಅನುಗುಣವಾಗಿ ನೈಸರ್ಗಿಕ ಸಂಪತ್ತನ್ನು ಹೆಚ್ಚಿಸಿ ಜನಜೀವನ ನಾಗರಿಕತೆ ಸಂಸ್ಕೃತಿ ಕಲೆ ವಾಸ್ತುಶಿಲ್ಪದ ಅಭಿವೃದ್ಧಿಗೆ ಅನುವುಮಾಡಿಕೊಡುತ್ತದೆ. ಹೀಗೆ ಪ್ರದೇಶ ಒಂದರ ಸಂಸ್ಕೃತಿಯ ಹಿರಿಮೆ ಗರಿಮೆ ಮೇಲೆ ಭೌಗೋಳಿಕ ಪರಿಸರದ ಪ್ರಭಾವ ನಿಚ್ಚಳವಾದದ್ದು. ಯಾವುದೇ ಒಂದು ಪ್ರದೇಶದ ಬಗ್ಗೆ ಸಂಶೋಧನೆ ಕಾರ್ಯ ಕೈಗೊಳ್ಳಬೇಕಾದರೆ ಪ್ರಮುಖವಾಗಿ ಅಲ್ಲಿನ ಭೌಗೋಳಿಕ ಪರಿಸರದ ವೈಶಿಷ್ಟ್ಯಗಳನ್ನು ತಿಳಿದುಕೊಳ್ಳಬೇಕಾದ್ದು ತುಂಬಾ ಅವಶ್ಯಕ. ಈ ಅಂಶಗಳನ್ನು ಗಮನಹರಿಸಿ ಪ್ರಸ್ತುತ ಅಧ್ಯಯನದ ಕಾನಹೊಸಹಳ್ಳಿ ಹೋಬಳಿಯ ಭೌಗೋಳಿಕ ಅಂಶಗಳು ಮಾನವನ ಜೀವನದ ಮೇಲೆ ಯಾವ ರೀತಿ ಪ್ರಭಾವ ಬೀರಿವೆ ಎಂದು ತಿಳಿದುಕೊಳ್ಳುವುದು ಅಗತ್ಯವಾಗಿದೆ.

**೨.೧ ಕಾನಾಹೊಸಹಳ್ಳಿ ಹೋಬಳಿಯ ಭೌಗೋಳಿಕ ಪರಿಸರ**

ಉತ್ತರ ಕರ್ನಾಟಕದ ಪ್ರಮುಖ ಜಿಲ್ಲೆಗಳಲ್ಲಿ ಬಳ್ಳಾರಿ ಕೂಡ ಒಂದು. ಈ ಜಿಲ್ಲೆಯಲ್ಲಿ ಹನ್ನೊಂದು ತಾಲ್ಲೂಕುಗಳನ್ನು ಒಳಗೊಂಡಿದೆ. ಇತ್ತೀಚಿಗೆ ಅಂದರೆ ಮಾರ್ಚ ೧೫, ೨೦೧೭ ರಂದು ರಾಜ್ಯ ಸರ್ಕಾರ ಬಜೆಟ್ ಮಂಡನೆಯಲ್ಲಿ ಹೊಸದಾಗಿ ಮೂರು ತಾಲ್ಲೂಕುಗಳನ್ನು ಘೋಷಿಸಿದ್ದಾರೆ. ಅವುಗಳೆಂದರೆ ಕೊಟ್ಟೂರು, ಕಂಪ್ಲಿ, ಕುರುಕೋಡು. ಬಳ್ಳಾರಿ ಜಿಲ್ಲೆಯ ತಾಲ್ಲೂಕಗಳ ವಿಸ್ತೀರ್ಣದಲ್ಲಿ ಕೂಡ್ಲಿಗಿ ಅತಿ ದೊಡ್ಡ ತಾಲ್ಲೂಕು ಆಗಿದೆ. ಇದರ ವಿಸ್ತೀರ್ಣ ೧.೫೯.೭೦೬ ಹೆಕ್ಟೇರಗಳು. ಈ ತಾಲೂಕಿನಲ್ಲಿ ನಾಲ್ಕು ಹೋಬಳಿಗಳಿದ್ದು ಪ್ರಸ್ತುತ ಕೊಟ್ಟೂರು ತಾಲ್ಲೂಕಾದಕಾರಣ ಕೂಡ್ಲಗಿ, ಗುಡೇಕೋಟೆ, ಕಾನಾಹೊಸಹಳ್ಳಿ ಎಂಬ ಮೂರು ಹೋಬಳಿ ಕೇಂದ್ರಗಳನ್ನು ಒಳಗೊಂಡಿದೆ.[೧] ಕಾನಾಹೊಸಹಳ್ಳಿಯೂ ೧೪°.೩೮°.೩೦ ಉತ್ತರ ಅಕ್ಷಾಂಶ ೭೬°.೩೫°.೦೦ ಪೂರ್ವ ರೇಖಾಂಶಗಳವರೆಗೆ ಈ ಪ್ರದೇಶವೂ ವ್ಯಾಪಿಸಿಕೊಂಡಿದೆ. ಕಾನಾಹೊಸಹಳ್ಳಿ ಹೋಬಳಿ ಪ್ರದೇಶ ಭಾರತದ ದಖ್ಖನ ಪ್ರಸ್ಥಭೂಮಿಯ ದಕ್ಷಿಣ ಭಾರತದ ಕರ್ನಾಟಕದ ಮಧ್ಯಭಾಗದ ಬಯಲು ಸೀಮೆಯಲ್ಲಿ ನಲೆಗೊಂಡಿದೆ. ಈ ಹೋಬಳಿಯೂ ಉತ್ತರಕ್ಕೆ ಕೂಡ್ಲಗಿ, ದಕ್ಷಿಣಕ್ಕೆ ಜಗಳೂರು ಪೂರ್ವಕ್ಕೆ ಮೊಳಕಾಮ್ಮೂರ ಪಶ್ಚಿಮಕ್ಕೆ ಕೊಟ್ಟೂರು ತಾಲ್ಲೂಕುಗಳಿವೆ. ಇದು ಜಿಲ್ಲಾ ಕೇಂದ್ರ ಬಳ್ಳಾರಿಯಿಂದ ೮೨ ಕೀ.ಮೀ ಮತ್ತು ತಾಲ್ಲೂಕು ಕೇಂದ್ರವಾದ ಕೂಡ್ಲಗಿಯಿಂದ ೩೦ ಕೀ.ಮೀ ದೂರ ಇದೆ.[೨] ಕೂಡ್ಲಗಿ ಮತ್ತು ಚಿತ್ರದುರ್ಗ ನಡುವಿನ ರಾಷ್ಟ್ರೀಯ ಹೆದ್ದಾರಿಯಲ್ಲಿದೆ. ೨೦೧೧ರ ಜನಗಣತಿಯ ಪ್ರಕಾರ ಈ ಹೋಬಳಿಯ ಜನಸಂಖ್ಯೆ ೭೯.೫೬೬ ಇದ್ದು, ಇದು ಸಮುದ್ರ ಮಟ್ಟದಿಂದ ಸುಮಾರು ೫೩೩ ಮೀ. ಎತ್ತರದಲ್ಲಿದೆ. ಕಾನಾಹೊಸಹಳ್ಳಿ ಹೋಬಳಿಯ ಸರಾಸರಿ ವಿಸ್ತೀರ್ಣ ೨೩೮ ಚ. ಕೀ.ಮೀ ಆಗಿದೆ.

ಕಾನಾಹೊಸಹಳ್ಳಿ ಹೋಬಳಿ ಪರಿಸರವು ಕೆಲವು ಸಣ್ಣ ಪ್ರಮಾಣದ ಕಲ್ಲು, ಗುಂಡು ಬಂಡೆಗಳ ಗುಡ್ಡಗಳಿವೆ. ಈ ಭಾಗದಲ್ಲಿ ಅಷ್ಟೇನು ದಟ್ಟವಲ್ಲದ ಅರಣ್ಯ ಪ್ರದೇಶವಿದೆ. ಉಳಿದಂತೆಲ್ಲಾ ಬಯಲು ಸೀಮೆಯೇ ಕಾಣುತ್ತದೆ. ಪ್ರಾಕೃತಿವಾಗಿ ಇಲ್ಲಿನ ಭೂ ಪ್ರದೇಶದಲ್ಲಿ ಎರೆಮಣ್ಣು ಕಲ್ಲು ಮರಳು ಮಿಶ್ರಿತ ಕೆಂಪು ಮಣ್ಣು ಮತ್ತು ಕಂದು ಮಸೂರೆಯ ಮಣ್ಣುಗಳು ಕಾಣಿಸುತ್ತವೆ. ಈ ಹೋಬಳಿಗೆ ವ್ಯಾಪಿಸಿಕೊಂಡಿರುವ ಕೆಲವು ಗ್ರಾಮಗಳಲ್ಲಿ ಸಣ್ಣ ಪ್ರಮಾಣದ ಹಳ್ಳ-ಕೊಳ್ಳಗಳು, ನದಿಗಳು ಹರಿಯುತ್ತಿವೆ. ಅವುಗಳಲ್ಲಿ ಚಿನ್ನ ಹಗರಿ ನದಿಯೂ ಚಿತ್ರದುರ್ಗ ಜಿಲ್ಲೆಯ ಪಶ್ಚಿಮ ಬೆಟ್ಟದ ಓಬಳದೇವರ ಗುಡ್ಡದಲ್ಲಿ ಹುಟ್ಟಿ ಉಪನಾಯಕನಹಳ್ಳಿ, ವಡ್ಡನಹಳ್ಳಿ, ಚಿಕ್ಕಗೊಂಡನಹಳ್ಳಿ, ದೋಣ್ಣಿಹಳ್ಳಿ, ಮಲ್ಲಾಪುರದ ಮೂಲಕ ಹರಿದುಕೊಂಡು ಕಲ್ಲಹಳ್ಳಿ ಹತ್ತಿರ ಕಾನಾಹೊಸಹಳ್ಳಿ ಹೋಬಳಿ ಪರಿಸರವನ್ನು ಪ್ರವೇಶಿಸುತ್ತದೆ. ನಂತರ ಕಲ್ಲಹಳ್ಳಿಯಿಂದ ತಿಪ್ಪೆಹಳ್ಳಿ, ಹೂಡೇಂ, ಕುಮತಿ

ಮೂಲಕ ಹರಿದುಕೊಂಡು ರಂಗಯ್ಯನ ದುರ್ಗ ಜಲಾಶಯವನ್ನು ಸೇರುತ್ತದೆ. ಈ ಸಂದರ್ಭದಲ್ಲಿ ಕಾನಾಮಡಗು, ಆಲೂರು, ಹುಲಿಕೆರೆ, ಸಕಲಾಪುರದಹಟ್ಟಿ, ಕಾನಾಹೊಸಹಳ್ಳಿ, ಇಮ್ಮಡಾಪುರ ಕಡೆಯ ಚಿಕ್ಕ ಚಿಕ್ಕ ಹಳ್ಳಗಳು ಈ ನದಿಗೆ ಬಂದು ಸೇರುತ್ತವೆ. ಈ ಪ್ರಾಚೀನ ಸ್ಥಳವು ಅನೇಕ ಪ್ರಾಚ್ಯಾವಶೇಷಗಳನ್ನು ತನ್ನ ಮಡಿಲಿನಲ್ಲಿ ಇಟ್ಟುಕೊಂಡು ಪ್ರಸಿದ್ಧಿ ಪಡೆದಿದೆ.

### ೨.೧.೧ ಬೆಟ್ಟಗಳು

ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಬೆಟ್ಟಗುಡ್ಡ ಅರಣ್ಯಗಳು ಹೊಂದಿರುವ ಗ್ರಾಮಗಳನ್ನು ಕಾಣಬಹುದು. ಹೊಸಹಳ್ಳಿ ಸುತ್ತಲೂ ದಟ್ಟವಾದ ಅಡವಿ ಇದ್ದು, ಪೂಜರಹಳ್ಳಿ, ಕುಮತಿ, ಲೋಕಿಕೆರೆ, ತಿಪ್ಪೆಹಳ್ಳಿ ಗ್ರಾಮಗಳಲ್ಲಿ ಸಣ್ಣ ಪುಟ್ಟ ಬೆಟ್ಟಗಳನ್ನು ಕಾಣಬಹುದು. ಲೋಕಿಕೆರೆಯಲ್ಲಿರುವ ಬೆಟ್ಟವನ್ನು ಸ್ಥಳೀಯರು ಮಟ್ಟಿ ಎಂದು ಸಹ ಕರೆಯುತ್ತಾರೆ. ಕುಮತಿ ಗ್ರಾಮವು ಕಲ್ಲು ಬಂಡೆಗಳಿಂದ ಆವೃತವಾದ ಬೆಟ್ಟಗುಡ್ಡಗಳಲ್ಲಿ ಜನವಸತಿಯನ್ನು ಇಂದಿಗೂ ಸಹ ಕಾಣ ಬಹುದು. ಪೂಜಾರಹಳ್ಳಿಯ ಅರಣ್ಯ ಪ್ರದೇಶವು ಬೆಟ್ಟಗುಡ್ಡಗಳಿಂದ ಮಳೆಗಾಲದಲ್ಲಿ ಹಚ್ಚ ಹಸಿರಾಗಿ ಕಂಗೋಳಿಸುತ್ತದೆ. ಪ್ರಮುಖವಾಗಿ ಅಡವಿ ಪೂಜಾರಹಳ್ಳಿ ಗ್ರಾಮದ ಉತ್ತರಕ್ಕಿರುವ ಬೆಟ್ಟದ ಮೇಲೆ ಕೋಟೆಯಿದೆ. ಈ ಬೆಟ್ಟವು ತುಂಬಾ ಕಡಿದಾಗಿದ್ದು ಇದರ ಸುತ್ತಲೂ ದಟ್ಟವಾದ ಕಾಡು ಇದೆ. ಈ ಬೆಟ್ಟದ ಮೇಲೆ ನಿಂತು ನೋಡಿದರೆ ಸುಮಾರು ೨ ಕೀ.ಮೀ ದೂರದವರೆಗಿನ ದೃಶ್ಯಗಳು ಕಾಣುತ್ತವೆ. ಗ್ರಾಮದ ಉತ್ತರ ದಿಕ್ಕಿಗೆ ಒಂದು ಕೀ.ಮೀ ದೂರದಲ್ಲಿ ಎರಡು ಬೆಟ್ಟಗಳಿವೆ ಇವುಗಳಿಗೆ ದುರುಗವ್ವ ಮತ್ತು ಬಸವ್ವನ ಬೆಟ್ಟಗಳೆಂದು ಹೆಸರು ಕಾನಾಹೊಸಹಳ್ಳಿ ಹೋಬಳಿಯೂ ಬಯಲು ಸೀಮೆಯಾಗಿದ್ದರು ಸಹ ಕೆಲವೊಂದು ಸಣ್ಣಪುಟ್ಟ ಬೆಟ್ಟಗುಡ್ಡಗಳಿಂದ ಆವೃತ್ತವಾಗಿರುವುದನ್ನು ಕಾಣಬಹುದು ಹಾಗೂ ಸಿಸ್ಟ, ಸ್ಯಾಂಡ, ಸ್ಟೋನ, ಜಾಸ್ಪರ ಇತ್ಯಾದಿ ಶಿಲೆಗಳನ್ನು ಸಹ ಕಾಣಬಹುದು.

### ೨.೧.೨ ಹವಾಗುಣ-ಮಳೆ

ಕಾನಾಹೊಸಹಳ್ಳಿ ಹೋಬಳಿಯು ಬಹುತೇಕ ಒಂದು ರೀತಿಯ ಹವಾಗುಣ ಹೊಂದಿದ್ದು. ಹೆಚ್ಚಾಗಿ ಶುಷ್ಕ ವಾಯುಗುಣವಿದೆ. ಹೊಸಹಳ್ಳಿ ಪರಿಸರದಲ್ಲಿ ಮಳೆಯ ಪ್ರಮಾಣ ತುಂಬಾ ಕಡಿಮೆ ಇದ್ದು. ಬಯಲು ಸೀಮೆ ಪ್ರದೇಶವಾಗಿದ್ದು. ಇಲ್ಲಿನ ಮಳೆಯಾಶ್ರಿತ ಭೂಮಿಗೆ ಮಾನ್ಸೂನ ಮಾರುತಗಳೆ ಈ ಪ್ರದೇಶದ ಜೀವಾಳ. ಮುಂಗಾರು ಹಾಗೂ ಹೀಗಾರು ಮಳೆ ಸೆರೆಗಿನ ಪ್ರದೇಶವಾಗಿದೆ. ಇಲ್ಲಿ ಹೆಚ್ಚು ಮಳೆ ಬೀಳದ ಪರಿಣಾಮ ದಟ್ಟವಾದ ಅರಣ್ಯ ಕಂಡು ಬರುವುದಿಲ್ಲ.

ಅದರೆ ಬಳ್ಳಾರಿ ಜಿಲ್ಲೆಯಲ್ಲಿಯು ಹೆಚ್ಚು ಕಾಯ್ದಿರಿಸಿದ ಅರಣ್ಯ ಪ್ರದೇಶವನ್ನು ಹೊಂದಿರುವ ತಾಲೂಕು ಕೂಡ್ಲಿಗಿಯಾಗಿದೆ. ಇಲ್ಲಿನ ಸರಾಸರಿ ಮಳೆಯ ಪ್ರಮಾಣ ೭೫೦ ಮೀ.ಮೀ.ರಷ್ಟಿದೆ. ಇಲ್ಲಿ ಬೇಸಿಗೆ ಕಾಲವು ಫೆಬ್ರವರಿಯಿಂದ ಮೇ ತಿಂಗಳ ಕೊನೆಯವರೆಗೆ ಇರುತ್ತದೆ. ಈ ಅವಧಿಯಲ್ಲಿ ಬಿಸಿಲಿನ ತಾಪಮಾನ ಕನಿಷ್ಟ ೩೧° ಸೆಲ್ಸಿಯಸನಿಂದ ಗರಿಷ್ಟ ೫° ಸೆಲ್ಸಿಯಸವರೆಗು ಇರುತ್ತದೆ. ಚಳಿಗಾಲದಲ್ಲಿ ಕನಿಷ್ಟ ೩೦° ಸೆಲ್ಸಿಯಸ ನಿಂದ ಗರಿಷ್ಟ ೩೮ ಸೆಲ್ಸಿಯಸವರೆಗೂ ದಾಖಲಾಗಿದೆ. ಈ ಹೋಬಳಿಯಲ್ಲಿ ಬೇಸುಗೆಯಲ್ಲಿ ಅತಿ ಹೆಚ್ಚು ಬಿಸಿಲು ಚಳಿಗಾಲದಲ್ಲಿ ಅತಿ ಚಳಿ ಕಂಡು ಬರುತ್ತದೆ. ಹಾಗೂ ಕೂಡ್ಲಿಗಿ ತಾಲೂಕಿನಲ್ಲಿ ಏಳು ಮಳೆ ಮಾಪನ ಕೇಂದ್ರಗಳು ಪ್ರಸ್ತುತವಾಗಿ ಕಾರ್ಯ ನಿರ್ವಹಿಸುತ್ತವೆ.

### ೨.೧.೩ ನೀರಾವರಿ ವ್ಯವಸ್ಥೆ

ಕಾನಾಹೊಸಹಳ್ಳಿ ಹೋಬಳಿ ಪರಿಸರದ ಸುತ್ತಮುತ್ತಲಿನ ಕೆಲವೂಂದು ಗ್ರಾಮಗಳು ನೀರಾವರಿ ವ್ಯವಸ್ಥೆಯನ್ನು ಹೊಂದಿವೆ. ಈ ಹೋಬಳಿಯ ವ್ಯಾಪ್ತಿಯಲ್ಲಿ ಬರುವ ಕಲ್ಲಹಳ್ಳಿ, ತಿಪ್ಪೆಹಳ್ಳಿ, ಹುಡೇಂ, ಕುಮತಿ ಗ್ರಾಮಗಳಿಗೆ ಚಿನ್ನಹಗರಿ ನದಿ ಹರಿಯುವುದರಿಂದ ನೀರಾವರಿ ವ್ಯವಸ್ಥೆಗೆ ಅನುಕೂಲಕರವಾಗಿದೆ. ಅದರೆ ಇತ್ತೀಚೆಗೆ ಇಲ್ಲವಾಗಿದೆ ಏಕೆಂದರೆ ಮಳೆ ಪ್ರಮಾಣ ಕಡಿಮೆಯಾಗಿರುವುದರಿಂದ ಈ ಹೋಬಳಿಯ ಜನರ ಬದುಕು ಮಳೆಯನ್ನೇ ಅವಲಂಬಿಸಿದ್ದಾರೆ. ಏಕೆಂದರೆ ಮಳೆಯಾಶ್ರಿತ ಭೂಮಿಯನ್ನು ಹೆಚ್ಚು ಹೊಂದಿದ್ದಾರೆ. ತೋಡಿದ ಬಾವಿಗಳಲ್ಲಿ ನೀರು ಇಲ್ಲ ಕೆರೆಗಳು ನೀರಿಲ್ಲದೆ ಭತ್ತಿವೆ. ಒಂದು ಕಾಲಕ್ಕೆ ಎಲ್ಲಾ ಕೆರೆಗಳು ತುಂಬಿ ಗದ್ದೆ, ತೆಂಗು, ಅಡಿಕೆ ತೂಟಗಳು ಎಲ್ಲಾಕಡೆ ಹಚ್ಚಹಸಿರಿನಿಂದ ಕಂಗೊಳಿಸುವ ಸಂಮೃದ್ಧ ಸೀಮೆಯಾಗಿತ್ತು. ಆದರೆ ಕೊಳುವೆ ಬಾವಿಗಳಿಂದ ಮಾತ್ರ ನೀರು ಪಡೆದು ನೀರಾವರಿ ಮಾಡಿಕೊಂಡಿರುವುದು ಈ ಹೊಬಳಿ ಪರಿಸರದಲ್ಲಿ ಕಂಡುಬರುತ್ತದೆ. ಕಾನಾಹೊಸಹಳ್ಳಿ ಹೋಬಳಿಯ ಹನಿನೀರಾವರಿಯ ಪ್ರಮಾಣ ೧೩೮೪.೫೪ ಹೇಕ್ಟರ್ ಹೊಂದಿದೆ ಹಾಗೂ ಕೊಳುವೆ ಬಾವಿ ನೀರಾವರಿ ಪ್ರಮಾಣ ೨೨೪೩.೮೬ ಹೇಕ್ಟರ ಹೊಂದಿದೆ.[3]

ಈ ಹೋಬಳಿಯ ವ್ಯಾಪ್ತಿಯಲ್ಲಿ ಬರುವ ಪ್ರತಿಯೊಂದು ಗ್ರಾಮ ಅಥವಾ ಹಳ್ಳಿಗಳಲ್ಲಿ ಒಂದೊಂದು ಕೆರೆಗಳು ಹಳ್ಳಗಳು ಬಾವಿಗಳು ಇರುವುದನ್ನು ಕಾಣುತ್ತವೆ. ಕೆರೆಗಳ ನಿರ್ಮಾಣವೇ ಗ್ರಾಮಗಳ ನಿರ್ಮಾಣಕ್ಕೆ ಭದ್ರ ಬುನಾದಿ ಆಗಿದೆ. ಹುಲಿಕೆರೆ, ಲೋಕಿಕೆರೆ, ಕ್ಯಾಸನಕೆರೆ ಹಾಗೂ ಕಲ್ಲಹಳ್ಳಿಯ ಉಪ್ಪಾರಹಳ್ಳ ಇತ್ಯಾದಿ ಕೆರೆ ಬಾವಿಗಳು ಈ ಹೋಬಳಿಯಲ್ಲಿ ನೀರಿನ ಸೆರೆಗಳಾಗಿವೆ.

ಈ ಹಳ್ಳಗಳು ಕೃಷಿಗೆ ನೀರನ್ನು ಒದಗಿಸುವುದು ಮಾತ್ರವಲ್ಲದೆ ಪ್ರಾಚೀನ ಮಾನವನ ವಸತಿ ತಾಣಗಳಾಗಿವೆ.

ಚಿಕ್ಕಹಗರಿ ಇದು ಚಿತ್ರದುರ್ಗ ಜಿಲ್ಲೆಯಲ್ಲಿ ಉಗಮವಾಗಿ ತಾಲೂಕಿನ ಪಶ್ಚಿಮ ಗಡಿಯಲ್ಲಿ ಹಾಯ್ದು ಹರಪನಹಳ್ಳಿ, ಹಗರಿಬೊಮ್ಮನಹಳ್ಳಿ ತಾಲೂಕುಗಳನ್ನು ಪ್ರವೇಶಿಸಿ ತುಂಗಾಭದ್ರ ನದಿಯ ಹಿನ್ನೀರಿನಲ್ಲಿ ಸೇರುತ್ತದೆ. ಈ ಎರಡು ನದಿಗಳ ಮಳೆಯನ್ನು ಆಧರಿಸಿವೆ. ಕೂಡ್ಲಿಗಿ ತಾಲೂಕಿನಲ್ಲಿ ಒಟ್ಟು ೫೧ ಕೆರೆಗಳಿದ್ದು ಅವುಗಳಲ್ಲಿ ೧೦ ಕೆರೆಗಳು ದೊಡ್ಡ ಕೆರೆಗಳು ಆಗಿವೆ ಹಾಗೂ ಹಲವು ಬಾವಿಗಳು ಕಂಡುಬಂದಿವೆ. ಒಟ್ಟಿನಲ್ಲಿ ಕೂಡ್ಲಿಗಿ ತಾಲೂಕಿನ ನೀರಾವರಿ ಪ್ರದೇಶವು ೩೩.೪೩೬ ಹೇಕ್ಟರ್ ಇದ್ದು ಇಲ್ಲಿನ ಜನರಿಗೂ ಪ್ರಾಣಿಗಳಿಗೂ ಜಲಸಂಪತ್ತು ವರದಾನವಾಗಿದೆ. ಕೃಷಿ ಇಲಾಖೆಯವರು ಮಳೆ ಮಾಪನ ಕೇಂದ್ರದ ಮಾಹಿತಿಯ ಪ್ರಕಾರ ವರ್ಷದಿಂದ ವರ್ಷಕ್ಕೆ ಪರಿಸರ ನಾಶವಾಗುತ್ತಿರುವುದರಿಂದ ಮಳೆ ಪ್ರಮಾಣವು ಇಲ್ಲಿ ಕಡಿಮೆಯಾಗುತ್ತಾ ಬಂದಿರುವದನ್ನ ತಿಳಿಸಿದ್ದಾರೆ.

### ೨.೧.೪ ಬೆಳೆಗಳು

ಕಾನಾಹೊಸಹಳ್ಳಿ ಹೋಬಳಿ ಪರಿಸರದ ಜನರು ಮಳೆ ಬಂದರೆ ಬೆಳೆ ಎಂಬುದು ಆಗಿದೆ. ಜನರು ಮಳೆಯನ್ನೇ ಆಶ್ರಿಸಿಕೊಂಡಿದ್ದಾರೆ. ಕೆಂಪುಮಣ್ಣು, ಮರಳು ಮಿಶ್ರಿತ ಭೂಮಿ, ಎರೆಮಣ್ಣು, ಕಪ್ಪುಮಣ್ಣು ಹೊಂದಿರುವ ಭೂಮಿಯನ್ನು ಈ ಪ್ರದೇಶದಲ್ಲಿ ಕಾಣುತ್ತೇವೆ. ಬೆದ್ದಲು ಭೂಮಿಯಲ್ಲಿ ಜೋಳ, ಸಜ್ಜೆ, ಶೇಂಗಾ, ಸೂರ್ಯಕಾಂತಿ ಹಾಗೂ ದ್ವಿದಳ ದಾನ್ಯಗಳನ್ನು ಪ್ರಮುಖವಾಗಿ ಬೆಳೆಯುತ್ತಾರೆ ಇದರ ಜೊತೆಗೆ ಹಲಸಂಧಿ, ಹೆಸರು, ಮಡಿಕೆಕಾಳು, ರಾಗಿ, ಹುರುಳಿ, ನವಣೆ ಬೆಳೆಗಳನ್ನು ಕಾಣಬಹುದು.[೪] ಕೆಲವೊಂದು ಪ್ರದೇಶದಲ್ಲಿ ನೀರಾವರಿಯ ಸೌಕಾರ್ಯ ಇರುವಲ್ಲಿ ಭತ್ತ, ರೇಷ್ಮೆ ಹತ್ತಿ ಈರುಳ್ಳಿ ಬೆಳೆಗಳು ಮುಖ್ಯವಾಗಿವೆ. ಜೊತೆಗೆ ತೋಟಗಾರಿಕೆ ಬೆಳೆಗಳನ್ನು ಸಹ ಕಾಣಬಹುದು. ತೋಟಗಾರಿಕೆ ಬೆಳೆಗಳಿಗೆ ಯೋಗ್ಯಮಣ್ಣು ವಾತವರಣಗಳಿದ್ದು ಈ ದೆಸೆಯಲ್ಲಿ ರೈತರು ಪ್ರಗತಿ ಸಾಧಿಸಲು ಸಾಕಷ್ಟು ಅವಕಾಶ ಇದೆ. ವ್ಯವಸಾಯವೇ ಈ ಹೋಬಳಿಯ ಪ್ರಧಾನ ವೃತ್ತಿಯಾಗಿದೆ. ಕಾನಾಹೊಸಹಳ್ಳಿ ಹೋಬಳಿಯ ತೋಟಗಾರಿಕೆಯ ಪ್ರಮಾಣ ೨೪೯.೭೫ಹೇಕ್ಟರ್ ಹೊಂದಿದೆ.[೫] ಈ ಹೋಬಳಿಯಲ್ಲಿ ತೋಟಗಾರಿಕೆಯ ಬೆಳೆಗಳಾದ ಹಣ್ಣುಗಳಲ್ಲಿ ದಾಳಿಂಬೆ, ಪಪ್ಪಾಯಿ, ಬಾಳೆ, ನಿಂಬೆ, ಸಪೋಟ, ಪೇರಲ ಬೆಳೆಯುತ್ತಾರೆ. ಸೊಪ್ಪು ಮತ್ತು ತರಕಾರಿಗಳಾದ ಪಾಲಕ. ಮೆಂತ್ಯ, ಕೊತ್ತಂಬರಿ, ರಾಜಗೀರಿ, ಗೆಜ್ಜರೆ, ಚವಳಿಕಾಯಿ, ಹೀರೆಕಾಯಿ ಹಾಗಲಕಾಯಿ, ಎಲೆಕೋಸು, ನುಗ್ಗೆ, ಕಲ್ಲಂಗಡಿ, ಕರಬೂಜ. ಅವರೆ

ಬೆಳೆಯುವುದನ್ನು ಕಾಣಬಹುದು ಹಾಗೂ ಹೂವಿನ ಬೆಳೆಗಳಲ್ಲಿ ಚೆಂಡು ಹೂವು ಕನಕಾಂಬರ ಮಲ್ಲಿಗೆ ಸೇವಂತಿಗೆ ಗೈಲಾರ್ಡಿಯ, ಗುಲಾಬಿ ಸುಗಂಧರಾಜ ಈ ಪರಿಸರದಲ್ಲಿ ಬೆಳೆಯುವುದನ್ನು ಕಾಣುತ್ತವೆ. ನಡೆತೊಪ್ಪು ತೆಂಗು, ಅಡಿಕೆ, ವೀಳೆದ್ಯಲೆ, ಗೊಡಂಬಿ ಹಾಗೂ ಔಷಧಿ ಮತ್ತು ಸುಂಗಂಧಿತ ಬೆಳೆಗಳು ಎಂದರೆ ತುಳುಸಿ ಶ್ರೀಗಂಧ ಕಾಣುತ್ತವೆ. ಕಾನಾಹೊಸಹಳ್ಳಿ ಹೋಬಳಿ ವಲಯ ಯೋಜನೆಯಡಿ ರೈತರಿಗೆ ಹಣ್ಣಿನ ಸಸಿಗಳನ್ನು ಉಚಿತವಾಗಿ ವಿತರಿಸುವುದನ್ನು ಕಾಣುತ್ತವೆ.

**೨.೧.೫ ಸಸ್ಯ ಸಂಪತ್ತು**

ಕಾನಾಹೊಸಹಳ್ಳಿ ಪರಿಸರದಲ್ಲಿ ಬೆಟ್ಟಗುಡ್ಡಗಳು ಅರಣ್ಯಗಳನ್ನು ಹೊಂದಿರುವ ನೆಲೆಯಾಗಿದೆ. ಇದು ಮಳೆ ಆಶ್ರಯ ಭೂಮಿಯಾಗಿದೆ ಇಲ್ಲಿ ಆರಾಬಿಕ. ಯುಪೋರ, ಬಿಯಾಸ್, ಜಾತಿಗಳಿಗೆ ಸೇರಿದ ಕುರುಚಲ ಗಿಡ ಮರಗಳು ಹೆಚ್ಚಾಗಿ ಬೆಳೆದಿವೆ. ಹುಣುಸೆ ಬೇವು ದಿಂಡು ಜಾಲಿ ಬಿಳಿಜಾಲಿ ಬಾರೆ ತೇಗಾ ಬಬ್ಬಲಿ ಮತ್ತಿ ಹುರುಗಲ, ಹಳಲೆ, ಬೇಲ, ಬಿಲ್ವಾರಾ, ಈಚಲು, ಪಾಪಸಕಳ್ಳಿ ಮುಂತಾದ ಮರಗಿಡಗಳು ಅರಣ್ಯ ಪ್ರದೇಶದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ತಾಳೆ ಮತ್ತು ಅಡಿಕೆ ಮರದ ದಿಂಡು ಮನೆ ಛಾವಣಿಗೆ ಉಪಯೋಗಿಸಲಾಗುವುದು. ಈಚಲು ಗಿಡದಿಂದ ಮನೆ ಬಳಕೆಯ ವಸ್ತು ಸಾಮಗ್ರಿಗಳನ್ನು ತಯಾರಿಸುತ್ತಾರೆ.

**೨.೧.೬ ಪ್ರಾಣಿ ಸಂಪತ್ತು**

ಕಾನಾಹೊಸಹಳ್ಳಿ ಹೋಬಳಿ ಪರಿಸರವು ಬಯಲು ಸೀಮೆಯಾಗಿದ್ದರು ಅಲ್ಲಲ್ಲೆ ಬೆಟ್ಟ ಗುಡ್ಡಗಳು ಅರಣ್ಯ ಪ್ರದೇಶ ಕಂಡುಬರುತ್ತದೆ. ಈ ರೀತಿಯ ಗಿಡ ಮರಗಳನ್ನು ಅವಲಂಬಿಸಿರುವ ಪ್ರಾಣಿ ಪಕ್ಷಿಗಳಾದ ಮೊಲ, ಜಿಂಕೆ, ಸಣ್ಣ ಸಸ್ತನಿ, ಪ್ರಾಣಿಗಳ ಜೊತೆಗೆ ಕಾಡು ಬೆಟ್ಟಗಳಲ್ಲಿ ಚಿರತೆ, ಕರಡಿ, ಕಾಡಹಂದಿ, ಮುಳ್ಳಹಂದಿ, ನರಿ, ಉಡ, ತೋಳ, ಮಂಗ ಮೊದಲಾದ ಕಾಡು ಪ್ರಾಣಿಗಳನ್ನು ಹಾಗೂ ನವಿಲು, ಕೋಗಿಲೆ, ಗಿಳಿ, ಕಾಗೆ, ಗುಬ್ಬಿ, ನೀರ್ ಕೋಳಿ, ಕೌಜುಗ, ಕಿಂಗಫಿಶರ್ ಮುಂತಾದ ನೂರಾರು ಜಾತಿಯ ಪಕ್ಷಿಗಳ ಮತ್ತು ವಿವಿಧ ಜಾತಿಯ ಹೂಗಳು ನಮ್ಮ ಕಣ್ಣಿಗೆ ಗೋಚರಿಸಿದ ಜೀವ ವೈವಿದ್ಯಗಳನ್ನು ಹೊಂದಿರುವುದರಿಂದ ಈ ಪ್ರದೇಶ ವಿಶೇಷವೆನಿಸಿದೆ. ಏಷ್ಯ ಖಂಡದಲ್ಲಿಯೇ ಎರಡನೆ ಕರಡಿ ಧಾಮವನ್ನು ಹೋಂದಿರುವ ಹೆಗ್ಗಳಿಕೆಗೆ ಕೂಡ್ಲಿಗಿ ತಾಲೂಕು ಪರಿಸರವಾಗಿದೆ. ಕಾನಾಹೊಸಹಳ್ಳಿ ಪರಿಸರವು ಭೌಗೋಳಿಕವಾಗಿ ಆಯಾ ಕಟ್ಟಿನ ಭಾಗದಲ್ಲಿದ್ದು ಇಲ್ಲಿನ ಪರಿಸರವು ಮಾನವನ ವಾಸಕ್ಕೆ ಯೋಗ್ಯವಾದ ನೆಲೆಯಾಗಿತ್ತು

ಎಂಬುವುದನ್ನು ಈ ಅಧ್ಯಯನದಿಂದ ತಿಳಿಯಬಹುದಾಗಿದೆ. ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವನ ಜೀವನೋಪಾಯ ಚಟುವಟಿಕೆಗಳು ಈ ಪ್ರದೇಶದಲ್ಲಿ ಆರಂಭಿಸಿರುವುದನ್ನು ಗುರುತಿಸಲಾಗಿದೆ.

### ೨.೧.೭ ಜನಸಾಂದ್ರತೆ

೨೦೧೧ ರ ಜನಗಣತಿಯ ಪ್ರಕಾರ ಕಾನಾಹೊಸಹಳ್ಳಿಯ ಒಟ್ಟು ೧೮೫೦ ಮನೆಗಳು ಇವೆ. ಇಲ್ಲಿನ ಜನಸಂಖ್ಯೆ ಒಟ್ಟ ೮೮೮೭ ಇದೆ. ಇದರಲ್ಲಿ ೪೪೧೧ ಗಂಡು ೪೪೧೬ ಹೆಣ್ಣು ಇದ್ದಾರೆ ಇನ್ನುಳಿದಂತೆ ಮಕ್ಕಳ ಸಂಖ್ಯೆ ೦ ರಿಂದ ೬ ವರ್ಷ ಒಳಗಿನ ಮಕ್ಕಳ ಸಂಖ್ಯೆ ೧೦೫೩ ಆಗಿದೆ. ಈ ಹೋಬಳಿ ಪರಿಸರದಲ್ಲಿ ಕಂಡು ಬರುವ ಸಮೂದಾಯಗಳೆಂದರೆ ಬ್ರಾಹ್ಮಣ, ನೇಕಾರ, ಲಿಂಗಾಯತ, ರೆಡ್ಡಿ, ಗಾಣಿಗ, ಜಂಗಮರು, ವಿಶ್ವಕರ್ಮ, ಕುರುಬರು, ಅಕ್ಕಸಾಲಿಗರು, ಈಡಿಗ, ಮಡಿವಾಳ, ನಾಯಕ, ಕಮ್ಮಾರ, ಮಾದಿಗ, ಭೋವಿ, ಉಪ್ಪಾರ, ಕುಂಬಾರ, ಲಂಬಾಣಿ, ಮುಸ್ಲಿಂ ಸಮುದಾಯಗಳನ್ನು ಕಾಣುತ್ತೇವೆ.

### ೨.೨ ಸ್ಥಳನಾಮ

ಮಾನವನು ಅಲೆಮಾರಿ ಜೀವನವನ್ನು ಕೈಬಿಟ್ಟು ಪ್ರಕೃತಿಯನ್ನು ಪಳಗಿಸಿ ತನ್ನ ಜೀವನಕ್ಕೆ ಒಗ್ಗಿಸಿಕೊಳ್ಳುವುದು ಸಾಧ್ಯ ಎಂಬುವುದನ್ನು ಯಾವಾಗ ಮನಗೊಂಡನೋ ಆಗ ಊರು ಹಳ್ಳಿಗಳು ಉಗಮವಾಯಿತು ಎನ್ನಬಹುದು. ತಾನು ನೆಲೆಗೊಂಡ ಸ್ಥಳದ ಜೊತೆಗೆ ತನ್ನನ್ನು ತೊಡಗಿಸಿಕೊಂಡ ಸಂಕೇತವಾಗಿ ಆ ಸ್ಥಳಕ್ಕೆ ಆತ ಹೆಸರಿತ್ತ ಆ ಸ್ಥಳ ಅವನ ಜೀವನದಲ್ಲಿ ಹಾದುಹೋದ ಕುರುವು ಆಗಿ ಒಂದು ಹೆಸರು ತಿಳಿಯಿತು ಕ್ರಮೇಣ ಅಲ್ಲಿ ಜನವಸತಿ ಇರಲಿ ಇಲ್ಲದಿರಲಿ ಒಂದು ಜನಾಂಗ ಸ್ಮೃತಿಯ ಕುರುವುಹಾಗಿ ಆ ಗುರುತು ಶಾಶ್ವತವಾಗಿ ಬಳಕೆಯಾಗುತ್ತಿದ್ದು ಹಾಗೇಯೇ ಹಲವು ಜನಾಂಗಗಳ ಸ್ಮೃತಿ ಮತ್ತು ಅಭಿಮಾನಗಳನ್ನು ಶಾಶ್ವತವಾಗಿ ಬೆಸೆಯುವ ಸಂಸ್ಕೃತಿಯ ಒಂದು ಕೊಂಡಿ ಎನಿಸಿತ್ತು ಈ ಕೊಂಡಿಯೇ ಸ್ಥಳನಾಮ.[೬]

ಒಂದು ಪ್ರದೇಶದ ಸಾಂಸ್ಕೃತಿಕ ಇತಿಹಾಸದ ಅಧ್ಯಯನದಲ್ಲಿ ಅವಶ್ಯಕವಾಗಿ ಗಮನಿಸಬೇಕಾದ ಅಂಶಗಳಲ್ಲಿ ಸ್ಥಳನಾಮವು ಒಂದು ಬದಲಾದ ಭೌಗೋಳಿಕ ಸ್ವರೂಪದ ಚರಿತ್ರೆಗೆ ಇದು ಸುಳಿವು ಕೊಡಬಲ್ಲದು. ಅಲ್ಲದೆ ಐತಿಹಾಸಿಕ ಘಟನೆಗೆ ಪುಷ್ಠಿಯನ್ನು ನೀಡಬಲ್ಲದು[೭] ಹೀಗೆ ಒಂದು ಪ್ರದೇಶದ ಇತಿಹಾಸ ರಚನೆಯಲ್ಲಿ ಅಲ್ಲಿನ ಸ್ಥಳನಾಮವು ಅತ್ಯಂತ ಮಹತ್ವವಾಗಿದ್ದು ಆ ಪ್ರದೇಶದ ಐತಿಹಾಸಿಕ ಹಿನ್ನಲೆಯನ್ನು ಕುರಿತು ಹೇಳುತ್ತದೆ.

ಜಗತ್ತಿನದಾದ್ಯಾಂತ ಸ್ಥಳ ನಾಮಗಳ ಬದಲಾವಣೆ ಅಥವಾ ಪುನರ್ ನಾಮಕರಣದ ಪ್ರಕ್ರೀಯೇ ಒಂದಲ್ಲ ಒಂದು ಕಾರಣದಿಂದ ನಡೆದುಕೊಂಡು ಬಂದಿವೆ. ಎಂಬ ವಿಚಾರವನ್ನು ಇತಿಹಾಸದಿಂದ ತಿಳಿಯಬಹುದು. ಒಂದು ಸ್ಥಳಕ್ಕೆ ಒಂದು ಹೆಸರಿಡಬೇಕಾದರೆ ಆ ಹೆಸರು ಅಲ್ಲಯ ಭೌಗೋಳಿಕ ಮತ್ತು ಸಾಂಸ್ಕೃತಿಕ ಅಂಶಗಳ ಒಡಲಿನಿಂದ ಮೂಡಿ ಬಂದಿರುತ್ತದೆ. ಇಂತಹ ಸ್ಥಳನಾಮಗಳ ಸ್ಥಳೀಯ ಸಾಂಸ್ಕೃತಿಕ ಪಳಿಯುಳಿಕೆಗಳ ಆಯಾ ಭಾಷೆಯ ವಿಶಿಷ್ಟ ಪಾರಂಪರಿಕ ಲಕ್ಷಣಗಳು ಹೀಗೆ ಒಂದೊಂದು ಹೆಸರಿನ ವೈಶಿಷ್ಟ ಅದರ ರೂಪ.

ಇತ್ತೀಚಿಗೆ ಸ್ಥಳನಾಮಗಳಲ್ಲಿ ಸಹಜವಾಗಿ ಬದಲಾವಣೆಯಾಗುತ್ತದೆ. ಹಳೆಯ ಹೆಸರಿನ ಜಾಗದಲ್ಲಿ ಹೊಸದೊಂದು ಅಂಕಿತ ಬೀಳುತ್ತದೆ. ಅಂತಹ ಬದಲಾವಣೆಗೆ ಸಾಮಾನ್ಯವಾಗಿದೆ. ಗ್ರಾಮ ಮಟ್ಟದಿಂದ ಹಿಡಿದು ಜಾಗತಿಕ ಮಟ್ಟದವರೆಗೂ ಏರ್ಪಟ್ಟಿದೆ. ಪ್ರಮುಖವಾಗಿ ಸ್ಥಳನಾಮದಿಂದ ಸ್ಥಳೀಯ ಇತಿಹಾಸ ತಿಳಿಯಲು ಸಹಾಯಕವಾಗುತ್ತದೆ.

ಮಾನವನ ಸೃಷ್ಠಿಯೊಂದಿಗೆ ಸ್ಥಳನಾಮಗಳ ಅಸ್ತಿತ್ವ ಸ್ಥಾಪಿತವಾಗಿದ್ದರೂ ನೈಸರ್ಗಿಕ ಕ್ರಿಯೆಯ ಜೊತೆಗಿನ ಅವನ ಒಡನಾಟ ಸ್ಥಳನಾಮ ಬೆಳವಣಿಗೆಯ ಪ್ರಕೀಯೆಗೆ ನಾಂದಿಯಾಗಿರಬೇಕು ಪ್ರಾಗೈತಿಹಾಸಿಕ ಮಾನವನ ಮೂಲನೆಲೆಗಳನ್ನು ಸಂಶೋಧಿಸಲು ಹೊರಟಾಗ ಅನೇಕ ವೈವಿಧ್ಯಮಯ ಕೆರೆಕಟ್ಟೆ, ನದಿ, ಹೊಳೆ, ಕಡಲುಗಳ ವಿವರಗಳು ದೊರಕಿವೆ.

ಸ್ಥಳನಾಮದಿಂದ ಮನುಕುಲದ ಹುಟ್ಟು ಬೆಳವಣಿಗೆ ಸಂಸ್ಕೃತಿ ನಾಗರಿಕತೆ ಸತ್ಯದ ತಿರುಳು ತಿಳಿಯಬಹುದು. ಒಟ್ಟನಲ್ಲಿ ಸ್ಥಳನಾಮಗಳು ಸರ್ವಕಾಲಿಕ ಧ್ವನಿಗಳಾಗಿವೆ ಹಾಗೂ ಗತಕಾಲದ ಸಂಸ್ಕೃತಿಯ ಹೆಜ್ಜೆ ಗುರುತುಗಳಿವೆ. ಮನುಕುಲದ ಇತಿಹಾಸದ ನಿಶ್ಚಿತ ದಾಖಲೆಗಳಾಗಿವೆ ಹಾಗೂ ಮನುಷ್ಯನ ಬದುಕಿನ ವೃತ್ತಾಂತಗಳನ್ನು ಅನಾವರಣಗೊಳಿಸುವ ಮಾಧ್ಯಮಗಳಾಗಿವೆ.

### ೨.೨.೧ ಕಾನಾಹೊಸಹಳ್ಳಿ ಪದದ ನಿಷ್ಪತ್ತಿ

ಮರದ ನೆರಳಲ್ಲಿ ಸಸಿಯು ಬೆಳೆಯುವುದಿಲ್ಲ ಅದರಂತೆ ನಗರಗಳ ಸಮೀಪವಿರುವ ಹಳ್ಳಿಗಳು ಅಭಿವೃದ್ಧಿ ಹೊಂದುವುದು ದುಸ್ತರ. ಕಾರಣ ಹಳ್ಳಿಗಳ ಜನರು ವ್ಯಾಪಾರಕ್ಕೆ ಸಾಂಸ್ಕೃತಿಕ ಮನೋರಂಜನೆಗಳಿಗೆ ಹತ್ತಿರದ ಪಟ್ಟಣಗಳನ್ನೇ ಆಶ್ರಯಿಸುತ್ತಾರೆ. ಈ ಮಾತಿಗೆ ಪೂರಕವಾಗಿ ಕೆಲವು ವರ್ಷಗಳಿಂದ ಅತೀ ಶೀಘ್ರಗತಿಯಲ್ಲಿ ವಿವಿಧ ರಂಗಗಳಲ್ಲಿ ಕಾನಾಹೊಸಹಳ್ಳಿಯು ಬೆಳೆದಿದೆ. ಊರಿಗೆ ಬಂದ ಹೊಸಬ 'ಕಾನಾ' ಎನ್ನುವ ಶಬ್ದವನ್ನು ಹಿಂದಿ ಭಾಷೆಯಲ್ಲಿನ ಊಟವೆಂದೇ ತಿಳಿಯುತ್ತಾನೆ. ಆದರೆ ಕಾನಾ ಎಂದರೆ ಕಾನನ, ಅಡವಿ, ಅರಣ್ಯ ಎಂದರ್ಥ. ಹಿರಿಯರು

ಹೇಳುವ ಪ್ರಕಾರವಾಗಿ ಹಿಂದೆ ಈ ಕಾನಾಹೊಸಹಳ್ಳಿ ಗ್ರಾಮದ ಸುತ್ತಲು ದಟ್ಟಡವಿ ಇತ್ತು ಎಂದಿದ್ದಾರೆ. ನಂತರದ ದಿನಗಳಲ್ಲಿ ಈ ಕಾಡನ್ನು ಮಾನವನು ಕಡಿಯುತ್ತಾ ಬಂದು ಹಂತ ಹಂತವಾಗಿ ಜನಸಮುದಾಯವು ವಾಸಿಸಲು ಆಶ್ರಯವನ್ನು ಕಟ್ಟಿಕೊಳ್ಳಲಾಯಿತು. ಹೊಸದಾಗಿ ಬಂದ ಜನಸಮುದಾಯವು ಇಲ್ಲಿ ನೆಲೆಸಿದ್ದರಿಂದ ಹೊಸಹಳ್ಳಿ ಎಂದು ಕರೆಯಲಾಯಿತು.[೮] ನಂತರದ ದಿನಗಳಲ್ಲಿ ಕಾನಾಹೊಸಹಳ್ಳಿ ಎಂದು ಇಂದಿಗೂ ಸಹ ಕರೆಯಲಾಗಿದೆ.

ಎರಡನೇ ಅಭಿಪ್ರಾಯ : ಮೂಲತಃ ಬೇರೆ ಬೇರೆ ಹಳ್ಳಿಗಳಿಂದ ಬಂದು ಇಲ್ಲಿ ನೆಲೆಸಿದಂತಹ ಜನಸಮುದಾಯಗಳು ಅನೇಕ ಇವೆ. ಉದಾ. ಉಜ್ಜಿನಿ, ಕೊಡಿಹಳ್ಳಿ, ಉಜ್ಜಪ್ಪನಹಳ್ಳಿ, ಸಿದ್ದಯ್ಯನಕೋಟೆ ಮುಂತಾದ ಗ್ರಾಮಗಳಿಂದ ಬೇರೆ ಬೇರೆ ಜನಸಮುದಾಯದವರು ಇಲ್ಲಿ ನೆಲೆಸಿದರು. ಇದಕ್ಕೆ ಕಾರಣ ಇಲ್ಲಿರುವ ಪ್ರಕೃತಿಯ ಸಹಕಾರ ಹಳ್ಳಕೊಳ್ಳ ಸುತ್ತಲು ಕೆರೆಗಳು ಫಲವತ್ತಾದ ಭೂಮಿ ಇರುವುದರಿಂದ ಇವರುಗಳು ಇಲ್ಲಿ ನೆಲೆಸಲಕ್ಕೆ ಕಾರಣವಾಯಿತು. ಹೊಸದಾಗಿ ಬಂದು ಸೇರಿ ಇಲ್ಲಿ ನೆಲೆಸಿದ ಜನಸಮೂಹಕ್ಕೆ ಹೊಸಹಳ್ಳಿ ಎಂದು ಕರೆಯಲಾಯಿತು. ಅಲ್ಲದೆ ಕಾನಾಮಡುಗು ಹತ್ತಿರವಿರುವುದರಿಂದ ಕಾನಾಹೊಸಹಳ್ಳಿ ಎಂದು ಜನಸಮೂಹವು ಇಂದಿಗೂ ಸಹ ಕಾನಾಹೊಸಹಳ್ಳಿ ಎಂದು ಪ್ರಚಲಿತದಲ್ಲಿರುವುದು ಕಂಡು ಬರುತ್ತದೆ.[೯]

ಮೂರನೇ ಅಭಿಪ್ರಾಯ : ಹದಿಮೂರನೆ ನಂಬರಿನ ರಾಷ್ಟ್ರೀಯ ಹೆದ್ದಾರಿಯು ಪೂರ್ಣ ವ್ಯವಸ್ಥಿತವಾಗಿ ರೂಪಿತಗೊಂಡು ಸಾರಿಗೆ ವ್ಯವಸ್ಥೆ ಚಾಲನೆಗೆ ಸಹಕಾರಿಯಾಯಿತು. ಹೊಸಪೇಟೆಯಿಂದ ದಕ್ಷಿಣಕ್ಕೆ ೭೫ ಕಿ.ಮೀ. ದೂರದಲ್ಲಿಯು ಇತ್ತ ಚಿತ್ರದುರ್ಗ ನಗರದಿಂದ ೫೦ ಕಿ. ಮೀ ದೂರದ ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿರುವ ಕಾನಾಹೊಸಹಳ್ಳಿ ಗ್ರಾಮವು ಪುರಾತನವಾಗಿದೆ. ಆಗ ಊರಿನ ಸುತ್ತ ದಟ್ಟವಾದ ಅಡವಿ ಇದ್ದಿರಬೇಕು. ಈ ಪ್ರದೇಶದಲ್ಲಿ ಜನರು ನೆಲೆಸಿದ್ದರಿಂದ ಕಾನಾಹೊಸಹಳ್ಳಿ ಎಂದು ಕರೆಯಲಾಯಿತು. ನಾನು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದ ದಿನಗಳಲ್ಲಿ ಅಡವಿ ಎನಿಸಿಕೊಂಡಿರುವ ಪ್ರದೇಶಕ್ಕೆ ಹೋದಾಗ ಒಂದು ಮರವಾಗಲಿ ಅಥವಾ ಒಂದು ದೊಡ್ಡ ಕುರುಚಲು ಗಿಡವಾಗಲಿ ಕಾಣುವುದು ದುರ್ಬಲ ಕಾರಣ ಇತ್ತೀಚಿನ ದಿನಗಳಲ್ಲಿ ಮಳೆ ಪ್ರಮಾಣ ಕಡಿಮೆಯಾಗಿ ಮಾನವನ ಚಟುವಟಿಕೆಗಳಿಂದ ಅಡವಿ ನಾಶವಾಗಿರಬಹುದು.

ಇಡೀ ದೇಶದ ಒಂದೊಂದು ರಾಜ್ಯದ ಜಿಲ್ಲೆ ತಾಲೂಕಿನ ಹಾಗೂ ಹೋಬಳಿಯ ಸ್ಥಳನಾಮಗಳ ತಲಸ್ಪರ್ಶಿ ಅಧ್ಯಯನದ ಫಲದಿಂದಾಗಿ ಅನೇಕ ಹೊಸ ವಿಷಯಗಳು ಬೆಳಕಿಗೆ ಬರುತ್ತವೆ. ಸ್ಥಳನಾಮ ಶಾಸ್ತ್ರಜ್ಞರು ಸ್ಥಳನಾಮಗಳ ವರ್ಗೀಕರಣವನ್ನು ತಮ್ಮ ತಮ್ಮ ಭೌಗೋಳಿಕ

ಪರಿಸರಗಳಿಗೆ ಅನುಗುಣವಾಗಿ ವಿಂಗಡಿಸಿ ವಿಶ್ಲೇಷಿಸಿದ್ದಾರೆ. ಈ ನಿಟ್ಟಿನಲ್ಲಿಯೇ ಕಾನಾಹೊಸಹಳ್ಳಿ ಹೋಬಳಿ ಪರಿಸರದ ೨೩ ಕಂದಾಯ ಗ್ರಾಮಗಳ ಸ್ಥಳನಾಮಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಒಂದು ಘಟ್ಟಕಗಳುಳ್ಳ ಸ್ಥಳನಾಮಗಳು

ಉದಾ : ಹೊಡೇಂ

ಎರಡು ಘಟಕಗಳುಳ್ಳ ಸ್ಥಳನಾಮಗಳು

ಉದಾ : ಆಲ+ಊರು = ಆಲೂರು

ಅಮಲ+ಪುರ = ಅಮಲಾಪುರ

ಬಣವಿ+ಕಲ್ಲು = ಬಣವಿಕಲ್ಲು

ಬೆಳ+ಕಟ್ಟೆ = ಬೆಳ್ಳಕಟ್ಟೆ

ಇಮ್ಮಡ+ಪುರ = ಇಮ್ಮಡಪುರ

ಹೊಸ+ಹಳ್ಳಿ= ಹೊಸಹಳ್ಳಿ

ಹಾರಕ+ಬಾವಿ = ಹಾರಕಬಾವಿ

ಕಲ್ಲ+ಹಳ್ಳಿ = ಕಲ್ಲಹಳ್ಳಿ

ಹುಲಿ+ಕೆರೆ =ಹುಲಿಕೆರೆ

ಪೂಜಾರ+ಹಳ್ಳಿ = ಪೂಜಾರಹಳ್ಳಿ

ಕ್ಯಾಸನ+ಕೆರೆ = ಕ್ಯಾಸನಕೆರೆ

ಸೂಲದ+ಹಳ್ಳಿ= ಸೂಲದಹಳ್ಳಿ

ತಿಪ್ಪೇ+ಹಳ್ಳಿ =ತಿಪ್ಪೇಹಳ್ಳಿ

ಲೋಕಿ+ಕೆರೆ= ಲೋಕಿಕೆರೆ

ಚೌಡ +ಪುರ = ಚೌಡಪುರ

ಮದ+ಪುರ = ಮಾದಾಪುರ

ಪಾಲಯ್ಯನ +ಕೋಟೆ = ಪಾಲಯ್ಯನಕೋಟೆ

ಮೂರು ಘಟಕಗಳುಳ್ಳ ಸ್ಥಳನಾಮಗಳು

ಉದಾ : ಬಯಲು + ತುಂಬರ + ಗುಂದಿ = ಬಯಲುತುಂಬರಗುದ್ದಿ

ಹಿರೇ + ಕುಂಬಳ + ಕುಂಟೆ = ಹಿರೇಕುಂಬಳಕುಂಟೆ

ಜುಮ್ಮ + ಓಬನ+ ಹಳ್ಳಿ = ಜುಮ್ಮೋಬನಹಳ್ಳಿ

ಕೆಂಚ + ಮಲ್ಲನ + ಹಳ್ಳಿ = ಕೆಂಚಮಲ್ಲಮಹಳ್ಳಿ

ರಂಗ + ನಾಥನ + ಹಳ್ಳಿ = ರಂಗನಾಥನಹಳ್ಳಿ

ಕಾನಾಹೊಸಹಳ್ಳಿ ಪರಿಸರದ ಸ್ಥಳನಾಮಗಳು ಈ ನಾಡಿನ ಪ್ರಾಚೀನ ಸ್ಥಳನಾಮಗಳಲ್ಲಿ ಒಂದೊಂದು ಸ್ಥಳನಾಮಾ ವಿಭಿನ್ನತೆಯಿಂದ ಕೂಡಿರುತ್ತವೆ. ಅವುಗಳನ್ನು ಈ ಮುಂದಿನಂತೆ ನೋಡಬಹುದಾಗಿದೆ. ಸ್ಥಳನಾಮ ಉಗಮಕ್ಕೆ ಪೂರಕವಾಗುವ ಅಂಶಗಳನ್ನು ಈ ಕೆಳಗಿನಂತೆ ಮೂರು ವಿಧಗಳಾಗಿ ವಿಂಗಡಿಸಬಹುದಾಗಿದೆ.

೧. ಪ್ರಾಕೃತಿಕ ಸ್ಥಳನಾಮಗಳು

೨. ಸಾಂಸ್ಕೃತಿಕ ಸ್ಥಳನಾಮಗಳು

೩. ಸಂಕೀಣ ಸ್ಥಳನಾಮಗಳು

**೧) ಪ್ರಾಕೃತಿಕ ಸ್ಥಳನಾಮಗಳು**

ಪ್ರಾಕೃತಿಕ ಮತ್ತು ಭೌಗೋಳಿಕ ಪರಿಸರವುಳ್ಳ ಸ್ಥಳನಾಮಗಳು ಕಾನಾಹೊಸಹಳ್ಳಿ ಹೋಬಳಿಯಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಪ್ರಕೃತಿ ದತ್ತವಾಗಿ ನಿರ್ಮಿತವಾದ ಗುಡ್ಡ, ಬೆಟ್ಟ, ಮಲೆ, ಕೋಡು, ಕಲ್ಲು, ತಿಟ್ಟು, ಕಾಡು, ದಿಣ್ಣೆ, ಹಳ್ಳ, ಕಂದರ, ನದಿ, ಕಾಲುವೆ, ಗುಂಡು, ಕೊಳ್ಳ, ಕೆರೆ, ಮರ, ಗಿಡ, ಬಳ್ಳಿ, ಪೊದೆಗಳ ಪ್ರತ್ಯಯಗಳು ಸೇರಿ ಅಥವಾ ನಾಮಗಳಾಗಿರುತ್ತವೆ.

ಇವುಗಳನ್ನು ಪ್ರಾಕೃತಿ ಸ್ಥಳನಾಮಾಗಳೆಂದು ಕರೆಯುಬಹುದು. ಈ ಪ್ರಾಕೃತಿಕ ಸ್ಥಳನಾಮಗಳನ್ನು ಮತ್ತೆ ನಾಲ್ಕು ಭಾಗಗಳಾಗಿ ವರ್ಗೀಕರಿಸಬಹುದು.

೧. ಜಲವಾಚಕಗಳು

೨. ಭೂವಾಚಕಗಳು

೩. ಸಸ್ಯವಾಚಕಗಳು

೪. ಪ್ರಾಣಿವಾಚಕಗಳು

೧. ಜಲವಾಚಕಗಳು

೧. ಸಹಜ ಜಲವಾಚಕಗಳು : ಸ್ವಾಭಾವಿಕವಾಗಿ ಮನುಷ್ಯನ ಸ್ಪರ್ಶವಿಲ್ಲದೆ ತನಗೆ ತಾನೇ ಪ್ರಕೃತಿ ದತ್ತವಾದ ನೀರಿನ ಪ್ರದೇಶಗಳನ್ನು ಸೂಚಿಸುವ ಪದಗಳೇ ಸಹಜ ಜಲವಾಚಕಗಳು ಅರೆ, ಅಲೆ, ಆಲ, ಇರೆ, ಕಡು, ಕುದಿ, ಅತ್ತ, ಕೊಡು, ಗುಂಡಿ, ಬಸೆ, ಮಡವು, ಮಳೆ, ಸಮುದ್ರ, ಹೊಳೆ, ಇತ್ಯಾದಿಗಳು ಈ ಸಹಜ ಜಲವಾಚಕಗಳನ್ನು ಕಾಣಬಹುದು.

೧. ಅಲೆ : ಆಲೂರು

೨. ಹೊಳೆ : ಚಿಕ್ಕಮಲ್ಲನಹೊಳೆ

೩. ಸಮುದ್ರ : ಭೀಮಸಮುದ್ರ

೪. ಮಡುವು : ಕಾನಾಹೊಸಹಳ್ಳಿ

೨. ಮಾನವನಿಂದ ನಿರ್ಮಿತಗೊಂಡ ಜಲಶಗಳಿಗೆ ಸಂಬಂಧಿಸಿದ ಜಲವಾಚಕಗಳು:-

ಮಾನವನು ಬುದ್ಧಿವಂತನಾಗಿ ತಾನು ನೆಲೆನಿಂತ ಸ್ಥಳಗಳಲ್ಲಿ ತನ್ನ ದೈನಂದಿನ ಜೀವನಕ್ಕೆ ಬೇಸಾಯಕ್ಕೆ ಪ್ರಕೃತಿ ಸಹಜವಾಗಿ ಕೆಲವು ನದಿ, ಕಾಲುವೆ, ಬಾವಿ, ಹಳ್ಳ, ಝರಿ, ಗುಂಡಿ, ಕೊಳ್ಳ ಇಲ್ಲದಿದ್ದ ಸಂದರ್ಭದಲ್ಲಿ ಕೆರೆ, ಕಟ್ಟೆ, ಕಾಲುವೆ ಅಡ್ಡ ಹಳ್ಳಗಳಿಗೆ ಕಟ್ಟಲಾದ ಸೇತುವೆಗಳ ಒಡ್ಡು-ಏರಿ, ಅಣೆಕಟ್ಟು ಇತ್ಯಾದಿಗಳಾಗಿವೆ.

೧. ಕಟ್ಟೆ : ಬೆಳಕಟ್ಟೆ

೨. ಕೆರೆ : ಹುಲಿಕೆರೆ, ಲೋಕಿಕೆರೆ, ಕ್ಯಾಸನಕೆರೆ

೨. ಶಿಲಾವಾಚಿ ಸ್ಥಳನಾಮಗಳು :

ಪ್ರಾಚೀನ ಮಾನವನ ಕಾಲದಿಂದಲೂ ಅವನಿಗೆ ಶಿಲೆ(ಕಲ್ಲು)ನೊಡನೆ ಅತ್ಯಂತ ನಿಕಟ ಒಡನಾಟವಿದೆ ಪುರಾತನ ಮಾನವನು ಅಲೆಮಾರಿಯಾಗಿ ಪ್ರಾಣಿಗಳನ್ನು ಭೇಟಿಯಾಡಲು ಕಲ್ಲುಗಳೇ ಅವನಿಗೆ ಆಯುದ್ಧಗಳಾಗಿದ್ದವು. ಶಿಲಾವಾಚಕವಾಗಿ ಸ್ಥಳನಾಮಗಳು ಅತ್ಯಂತ ಪುರಾತನವಾದವು ಶಿಲೆಯ ಅರ್ಥವಿರುವ ಕುಲ್ಲು, ಬಂಡೆ, ಬೆಂಚಿ, ಗುಡ್ಡ, ಗುಂಡು, ಕೋಟೆ ಎಂಬ ಪದಗಳನ್ನು ಗಮನಿಸಬಹುದು. ಕಾನಾಹೊಸಹಳ್ಳಿ ಪರಿಸರದಲ್ಲಿನ ಶಿಲಾವಾಚಿ ಸ್ಥಳನಾಮಾಗಳ ಈ ರೀತಿಯಾಗಿವೆ.

ಉದಾ : ಕಲ್ಲಹಳ್ಳಿ, ಬಣವಿಕಲ್ಲು, ಪಾಲಯ್ಯನಕೋಟೆ, ಕೆಂಚಮಲ್ಲನಹಳ್ಳಿ, ಹೊನ್ನಿನ ತಿಪ್ಪೇಹಳ್ಳಿ

೨. ಸಸ್ಯವಾಚಿ ಸ್ಥಳನಾಮಗಳು :

ಯಾವ ಸ್ಥಳಗಳಲ್ಲಿ ನಿರ್ದಿಷ್ಟ ಜಾತಿಯ ಮರ, ಗಿಡ, ಬಳ್ಳಿ, ಮಳೆ, ಬೆಳೆ, ಹುಲ್ಲು, ಸೊಪ್ಪು, ಹೂವು, ಹಣ್ಣು ಇತ್ಯಾದಿಗಳು ಹೆಚ್ಚಾಗಿ ಬೆಳೆಯುತ್ತವೆಯೊ ಅವಕ್ಕೆ ಅನುಗುಣವಾಗಿ ಸ್ಥಳನಾಮಗಳ ಹುಟ್ಟಿಕೊಂಡಿರುವುದನ್ನು ನೋಡಬಹುದು.

ಉದಾ : ಆಲ – ಆಲೂರು

ಕುಂಬಳಿ – ಹಿರೇಕುಂಬಳಕುಂಟೆ

೪. ಪ್ರಾಣಿವಾಚಿ ಸ್ಥಳನಾಮಗಳು :

ಪ್ರಾಣಿ ಮತ್ತು ಪಕ್ಷಿಗಳಿಂದಲೂ ಊರುಗಳಿಗೆ ಹೆಸರು ಬಂದಿರುವುದನ್ನು ಕಾಣಬಹುದು ಅವು ಸಾಕು ಪ್ರಾಣಿಯಾಗಿರಬಹುದು ಅಥವಾ ಕಾಡಿನ ಪ್ರಾಣಿ ಪಕ್ಷಿಗಳಾಗಿರಬಹುದು.

ಹುಲಿ : ಹುಲಿಕೆರೆ

ಮಂಗ : ಮಂಗಪುರ

## ೨) ಸಾಂಸ್ಕೃತಿಕ ಸ್ಥಳನಾಮಗಳು

ವ್ಯಕ್ತಿವಾಚಿ ಸ್ಥಳನಾಮಗಳು ಸಾಮಾನ್ಯವಾಗಿ ಕೆಲವು ಊರುಗಳಿಗೆ ವ್ಯಕ್ತಿಯ ಹೆಸರುಗಳ ಬಂದಿರುತ್ತವೆ, ಸ್ಥಳನಾಮ ನಿರ್ದೇಶನದ ಆರಂಭಿಕ ಹಂತ ನೈಸರ್ಗಿಕ ವಾತವರಣವನ್ನು ಅವಲಂಭಿಸಿತ್ತು. ಮುಂದೆ ಸಂಸ್ಕೃತಿಯ ವಿಕಾಸನದ ಹಾದಿಯಲ್ಲಿ ಜನಾಂಗಿವಾಗಿ ಸಾಗಿ ಬಂತು, ಇದರೊಂದಿಗೆ ಅಂದಿನ ಸಮಾಜದಲ್ಲಿ ಯಾವುದೇ ಕಾರಣಕ್ಕೆ ವಿಶೇಷವಾದ ಘಟನೆಯಿಂದ ಹೆಸರಾದ ವ್ಯಕ್ತಿಯನ್ನು ಊರಿನ ಮುಖಂಡ, ಯಜಮಾನ, ಚೆರ್ಮನ, ಪಟೇಲ, ಶಾನುಭೋಗ ಅಲ್ಲಿನ ಸರ್ವತೋಮುಖ ಬೆಳವಣಿಗೆಗೆ ಕಾರಣನಾಗಿದ್ದು ಕಾಲಕ್ರಮೇಣ ಆ ವ್ಯಕ್ರಿಯ ಹೆಸರು ಊರು ಹೆಸರುಗಳಾಗಿರುವುದುನ್ನು ಕಾಣಬಹುದು.

೧. ಪುರುಷ ಸೂಚಕ ಸ್ಥಳನಾಮಗಳು

೨. ಸ್ತ್ರೀ ಸೂಚಕ ಸ್ಥಳನಾಮಗಳು

೧. ಪುರುಷ ಸೂಚಕ ಸ್ಥಳನಾಮಗಳು

ಉದಾ : ಕೆಂಚ : ಕೆಂಚಮಲ್ಲನಹಳ್ಳಿ

ಪಾಲಯ್ಯ : ಪಾಲಯ್ಯನಕೋಟೆ

ಪೂಜಾರಿ : ಪೂಜಾರಹಳ್ಳಿ

ರಂಗ : ರಂಗನಾಥನಹಳ್ಳಿ

ತಿಪ್ಪ : ತಿಪ್ಪೇಹಳ್ಳಿ

ಚೌಡ : ಚಿನ್ನಹಗರಿ

೨. ಸ್ತ್ರೀ ಸೂಚಕ ಸ್ಥಳನಾಮಗಳು

ಉದಾ : ಅಮ್ಮ : ಅಮಲಾಪುರ

ತಾಯಿ : ತಾಯಕನಹಳ್ಳಿ

ಚಿನ್ನಮ್ಮ : ಚಿನ್ನಹಗರಿ

೩) ಸಂಕೀರ್ಣ ಸ್ಥಳನಾಮಗಳು

ಊರು : ಆಲೂರ, ಮಲೂರು.

ಕಲ್ಲು : ಕಲ್ಲಹಳ್ಳಿ, ಬಣವಿಕಲ್ಲು

ಪುರ : ಅಮಲಾಪುರ, ಚೌಡಪುರ, ಮದಪುರ, ಸುಲ್ತಾನಪುರ

ತಾಂಡ : ಪೂಜಾರಹಳ್ಳಿ ತಾಂಡ

೨.೩ ಪ್ರಾಗೈತಿಹಾಸಿಕ ಹಿನ್ನಲೆ

ಆದಿ ಮಾನವನು ವಿಕಾಸ ಹಾಗೂ ಆತನು ಬೆಳೆದು ಬಂದ ಹಾದಿ ಮತ್ತು ದೀರ್ಘಕಾಲದ ಆತನ ಜೀವನ ಶೈಲಿಯನ್ನು ಅಧ್ಯಯನ ದೃಷ್ಟಿಯಿಂದ ಪ್ರಾಗೈತಿಹಾಸಿಕ ಕಾಲ. ಆದಿ ಇತಿಹಾಸಕಾಲ ಮತ್ತು ಇತಿಹಾಸ ಕಾಲ ಎಂದು ಕ್ರಮವಾಗಿ ವಿಭಾಗಿಸಿಕೊಳ್ಳಲಾಗಿದೆ. ಇದರಲ್ಲಿ ಮೊದಲನೆಯ ಹಂತವೇ ಪ್ರಾಗೈತಿಹಾಸಿಕ ಕಾಲವು ಮಾನವನಿಗೆ ಅಕ್ಷರ ಜ್ಞಾನವಿಲ್ಲದ ಕಾಲವಾಗಿದೆ. ಈ ಕಾಲದಲ್ಲಿ ಮಾನವನು ಅನಾಗರಿಕತೆಯಿಂದ ಕೂಡಿರುವ ಬದುಕನ್ನು ನಿರ್ವಹಿಸುತ್ತಿದ್ದನು ಮತ್ತೆ ಯಾವುದೇ ರೀತಿಯಾಗಿ ಬರವಣಿಗೆ ಅಥವಾ ಲಿಪಿಯು ಸಹ ಗೊತ್ತಿರಲಿಲ್ಲ ಆದ್ದರಿಂದ ಸಾಹಿತ್ಯ ಮತ್ತು ದಂತಕತೆಗಳು ನಮಗೆ ಲಭ್ಯವಾಗುವುದಿಲ್ಲ. ಆದ್ದರಿಂದ ಅವನು ಕಾಲಾನುಕ್ರಮದಲ್ಲಿ ಬಿಟ್ಟುಹೊದ ಕುರುಹುಗಳಿಂದ ಅವನ ಜೀವನ ಸಂಸ್ಕೃತಿ ತಿಳಿಯುವ ಪ್ರಯತ್ನ ಇಂದಿಗೂ ಸಹ ನಡೆಯುತ್ತಲಿದೆ.

ಆದಿ ಮಾನವ ಬೇಟೆಯಾಡಲು ಆಹಾರ ಸಂಗ್ರಹಿಸಲು ಬಳಸಿರುವ ಕಲ್ಲಿನ ಆಯುಧೋಪಕರಣಗಳು, ಮಡಿಕೆಗಳು, ಪ್ರಕೃತಿಯಲ್ಲಿ ಕಂಡುಕೊಂಡದ್ದನು ಮತ್ತೆ ಆತನಿಗೆ ಆದ ಅನುಭವಗಳನ್ನು ಭಾವನೆಗಳನ್ನು ಗುಹೆಗಳಲ್ಲಿ ಬಯಲು ಬಂಡೆಗಳ ಮೇಲೆ ಚಿತ್ರಿಸುವ ಬಿಡಿಸುವ ಕಲೆಯನ್ನು ಕಲಿತುಕೊಂಡನು ಉದಾಹರಣೆಯಾಗಿ ಗೀರುಚಿತ್ರ ಮತ್ತು ವರ್ಣಚಿತ್ರಗಳು ಕಾಣುತ್ತವೆ. ಶಿಲಾಸಮಾಧಿಗಳು ಆಧಾರದ ಹಿನ್ನಲೆಯಲ್ಲಿ ಪ್ರಾಗಿತಿಹಾಸವನ್ನು ಶಿಲಾಯುಗವೆಂದು ಕರೆಯಲಾಯಿತು. ಇದರ ಜೊತೆಗೆ ಲೋಹವನ್ನು ಸಹ ಬಳಸಲು ಪ್ರಾರಂಭವಾದ ಕಾಲಘಟ್ಟವನ್ನು ಲೋಹಯುಗವೆಂದು ಎರಡು ರೀತಿಯಾಗಿ ಅಭ್ಯಾಸಿಸಲಾಯಿತು.

ಶಿಲಾಯುಗದಲ್ಲಿ ಮಾನವನು ಭೌತಿಕ, ಶಾರೀರಿಕವಾಗಿ ಬದಲಾವಣೆ ಜೊತೆಗೆ ತನ್ನ ಸುತ್ತಲಿನ ಪರಿಸರದಲ್ಲಿಯೂ ಪರಿವರ್ತನೆಯನ್ನುಂಟು ಮಾಡುತ್ತಿದ್ದನು. ಹೀಗೆ ಶಿಲಾಯುಗದ

ಮಾನವನ ಜೀವನದ ಸಂಸ್ಕೃತಿಯನ್ನು ತಿಳಿಯಲು ಕ್ರಮವಾಗಿ ಹಳೆಶಿಲಾಯುಗ, ಮಧ್ಯಶಿಲಾಯುಗ, ನವಶಿಲಾಯುಗ, ಶಿಲಾತಾಮ್ರಯುಗ, ಬೃಹತ್ ಶಿಲಾಯುಗ ಎಂದು ನಾಲ್ಕು ವಿಭಾಗಗಳಾಗಿ ಮಾಡಿರುವುದು. ಕೂಡ್ಲಿಗಿ ತಾಲೂಕಿನ ಕಾನಾಹೊಸಹಳ್ಳಿ ಹೋಬಳಿಯ ಪರಿಸದಲ್ಲಿ ಟಿ. ಕಲ್ಲಹಳ್ಳಿ, ಮಾಲಹಳ್ಳಿ, ಜುಮ್ಮೋಬನಹಳ್ಳಿ, ಓಬಳಾಪುರ, ಸುಣ್ಣಮರಡಿ, ತಿಪ್ಪೇಹಳ್ಳಿ, ಪೂಜಾರಹಳ್ಳಿ, ಕುಮತಿ ಮುಂತಾದವುಗಳು ಪ್ರಾಗೈತಿಹಾಸಿಕ ನೆಲೆಗಳಾಗಿವೆ. ಸಂಗನಕಲ್ಲು ನೆಲೆಯಲ್ಲಿ ಕೈಗೊಂಡಂತಹ ಉತ್ಖನನದ ವರದಿಗಳಿಂದ ಕರ್ನಾಟಕ ಪ್ರಾಗೈತಿಹಾಸ ಕಾಲದ ದೃಷ್ಟಿಯಲ್ಲಿ ಈ ತಾಲೂಕು ಅಥವಾ ಹೋಬಳಿಯ ಪ್ರದೇಶವು ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ.

### ೧. ಹಳೇಶಿಲಾಯುಗ ಸಂಸ್ಕೃತಿ

ಹಳೇಶಿಲಾಯುಗ ಎಂಬ ಕನ್ನಡ ಪದವು ಇಂಗ್ಲೀಷನ **"ಪ್ಯಾಲಿಯೋಲಿಥಿಕ್"** ಎಂಬ ಪದಕ್ಕೆ ಸಮಾನಾಗಿದೆ, ಪ್ಯಾಲಿಯೋಲಿಥಿಕ್ ಎಂಬ ಪದವು ಗ್ರೀಕನ **'ಪ್ಯಾಲಿಯೋ'** ಮತ್ತು **'ಲಿಥಿಕ್'**ಎಂಬ ಎರಡು ಪದಗಳಿಂದ ನಿಷ್ಪತ್ತಿ ಹೊಂದಿದೆ. ಪ್ಯಾಲಿಯೋ ಎಂದರೆ ಹಳೇಯ ಎಂತಲೂ ಲಿಥಿಕ್ ಎಂದರೆ ಶಿಲೆ ಎಂಬ ಅರ್ಥವಿದೆ.ಈ ಕಾಲದಲ್ಲಿ ಮಾನವನು ಜೀವನ ನಿರ್ವಹಣೆಗಾಗಿ ಒರಟು ಒರಟದ ಶಿಲಾ ಉಪಕರಣಗಳನ್ನು ತಯಾರಿಸಿಕೊಂಡು ಬಳಕೆ ಮಾಡುತ್ತಿದ್ದ ಮತ್ತು ಅವನ ರೀತಿ ನೀತಿಗಳ ಸಾಕಷ್ಟು ಸುಧಾರಿಸಿದೆ ಈ ಹಂತವನ್ನು ಶಿಲಾಯುಗ ಸಂಸ್ಕೃತಿ[೧೦] ಎಂದು ಕರೆಯಲಾಗಿದೆ.

### ೧.೧ ಆದಿ ಹಳೇಶಿಲಾಯುಗ

ಸುಮಾರು ೭ ಲಕ್ಷದಿಂದ ೧೨೫ ಲಕ್ಷ ವರ್ಷಗಳಷ್ಟು ಹಿಂದಿನ ಕಾಲ ಘಟ್ಟವನ್ನು ಹಳೇಶಿಲಾಯುಗ ಕಾಲವೆಂದು ಕರೆಯಲಾಗಿದೆ.[೧೧] ಭಾರತ ಹಾಗೇ ಕರ್ನಾಟಕದಲ್ಲಿಯೂ ಶಿಲಾಯುಗ ಕಾಲದಿಂದಲೂ ಮಾನವನ ಚಟುವಟಿಕೆಗಳನ್ನು ಗುರುತಿಸಲಾಗಿದೆ. ಬಳ್ಳಾರಿ ಜಿಲ್ಲೆಯ ಆಗಿನ ಮದ್ರಾಸ ಪ್ರಾಂತ್ಯದ ಇತರೆ ಜಿಲ್ಲೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಶಿಲಾಯುಗದ ನೆಲೆಗಳನ್ನು ಗುರುತಿಸಲಾಗಿದೆ. ೧೯೦೮ ರ ಭಾರತದ ಇಂಫೀರಿಯಲ್ ಗೆಜೆಟಿಯರ ತಿಳಿಸುತ್ತದೆ. ಕರ್ನಾಟಕದಲ್ಲಿ ಕೃಷ್ಣ ಮೇಲ್ದಂಡೆ ಮತ್ತು ಘಟಪ್ರಭಾ ನದಿ ಪಾತ್ರದಲ್ಲಿ ೧೫ ನೆಲೆಗಳನ್ನು ಸಂಶೋಧಕರು ಗುರುತಿಸಿದ್ದಾರೆ.

ಭಾರತದ ಪ್ರಾಗಿತಿಹಾಸದ ಪಿತಾಮಹ ಎಂದು ಕರೆಯಲ್ಪಟ್ಟಿರುವ **ರಾಬರ್ಟ ಬ್ರೂಸ್ ಫೂಟನು** ಬಳ್ಳಾರಿ ಜಿಲ್ಲೆಯ ಪ್ರಮುಖ ಪ್ರಾಗೈತಿಹಾಸಿಕ ನೆಲೆಗಳನ್ನು ಸರ್ವೇಕ್ಷಣೆ ಮಾಡಿ ಸುಮಾರು ೭೭ ನೆಲೆಗಳನ್ನು ಗುರುತಿಸಿ ಅವುಗಳಲ್ಲಿ ೩೬ ನೆಲೆಗಳು ಪ್ರಮುಖವಾಗಿವೆ. ಎಂದು ತಿಳಿಸುತ್ತಾನೆ.[೧೨] ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಕೂಡ್ಲಿಗಿ ತಾಲೂಕಿನ ಕಾನಾಹೊಸಹಳ್ಳಿ ಪರಿಸರದ ಜುಮ್ಮೊಬನಹಳ್ಳಿಯು ಆದಿ ಹಳೆಶಿಲಾಯುಗದ ಏಕೈಕ ನೆಲೆಯಾಗಿದೆ.

### ೧.೨ ಮಧ್ಯ ಹಳೇಶಿಲಾಯುಗ

ಬಳ್ಳಾರಿ ಜಿಲ್ಲೆಯಲ್ಲಿ ಈ ಕಾಲಘಟ್ಟಕ್ಕೆ ಸೇರಿದ ನಿವೇಶನಗಳನ್ನು ಸಂಗನಕಲ್ಲು, ನಿಟ್ಟೂರು ನೆಲೆಗಳಲ್ಲಿ ಬೆಳಕಿಗೆ ತರಲಾಗಿದೆ[೧೩] ಈ ಕಾಲಾದ ಆದಿ ಮಾನವ ನದಿಯ ಅಂಚಿನಲ್ಲಿ ಅಷ್ಟೇಯಲ್ಲದೆ ಬಯಲುಗಳಲ್ಲಿ ವಾಸ ಮಾಡಲು ರೂಪಿಸಿಕೊಂಡನು ಹಾಗೂ ವೇಗವಾಗಿ ಓಡಬಲ್ಲ ಪ್ರಾಣಿಗಳನ್ನು ಭೇಟೆಯಾಡಲು ಬಿಲ್ಲು ಬಾಣಗಳ ಪ್ರಯೋಗ ಮಾಡಿದನು. ಮೈ ಮುಚ್ಚಿಕೊಳ್ಳಲು ಅಥವಾ ಮಳೆ ಗಾಳಿಗೆ ದೇಹ ರಕ್ಷಣೆ ಪಡೆಯಲು ಮರದ ತೊಗಟೆ ಇಲ್ಲವೆ ಪ್ರಾಣಿಗಳ ಚರ್ಮವನ್ನು ಬಳಸಿಕೊಳ್ಳುವುದಕ್ಕೆ ಪ್ರಾರಂಭಿಸಿದ ಇವೆಲ್ಲ ಆದಿ ಮಾನವನು ತನ್ನ ಜೀವನ ಕ್ರಮದಲ್ಲಿ ಮಾಡಿಕೊಂಡ ಬದಲಾವಣೆಯನ್ನು ಸೂಚಿಸುತ್ತದೆ.

### ೧.೩ ಅಂತ್ಯ ಹಳೇಶಿಲಾಯುಗ

ಹಳೇಶಿಲಾಯುಗದ ಕೊನೆಯ ಹಂತವಾಗಿದೆ ಈ ಹಂತದ ನೆಲೆಗಳು ಸ್ವಲ್ಪಮಟ್ಟಿಗೆ ಕಡಿಮೆ ಎನ್ನಬಹುದು. ರಾಜ್ಯದಲ್ಲಿ ಮೊಟ್ಟ ಮೊದಲಿಗೆ ೧೯೫೯ ರಲ್ಲಿ ಸಾಲವಾಡಗಿಯಲ್ಲಿ ಉಪಕರಣ ಉತ್ಪಾದನಾ ನೆಲೆಯನ್ನು ಸುಂದರ ಅವರು ಗುರುತಿಸಿದ್ದಾರೆ.[೧೪] ರಾಜ್ಯದಲ್ಲಿ ಮಾಂಜ್ರಾ ದ್ರೋಣ, ಕೃಷ್ಣ, ತುಂಗ, ಶಿಂಷಾ, ಪೆನ್ನಾರ್ ನದಿ ಕೊಳ್ಳಗಳಲ್ಲಿ ಈ ನೆಲೆಗಳು ಹೆಚ್ಚಾಗಿ ಕಂಡುಬಂದಿವೆ. ಈ ಸಂಸ್ಕೃತಿಯ ಉಪಕರಣಗಳ ಮಾದರಿಗಳು ನಾಳು ಅಲಗುಗಳು, ಚೂರಿ ತರಹದ ಚಿಕ್ಕ ಪೂರೆಯುಳಿ, ಕೊರಗ, ಬಾಣದ ಮೊನೆ, ಹೆರೆಯುವ ಮಾದರಿ ಉಪಕರಣಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಎಲುಬು, ದಂತ ಜಿಂಕೆಯ ಕವಲು ಕೊಂಬು ಮೊದಲಾದವುಗಳಿಂದ ಉಪಕರಣಗಳನ್ನು ತಯರಿಸಿ ಬಳಸಿದ ಉದಾಹರಣೆಗಳಿವೆ.

ಈ ಕಾಲಕ್ಕೆ ಸೇರಿದ ಅವಶೇಷಗಳನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ, ಇಂಗಾಲ ೧೪ರ ಪರೀಕ್ಷೆಯಂತ ಈ ಹಂತದ ಕಾಲಮಾನವು ಸುಮಾರು ೧೦,೦೦೦ ವರ್ಷಗಳಿಂದ ೧೫,೦೦೦ ವರ್ಷಗಳಷ್ಟೇ ಪೂರ್ವದಲ್ಲಿ ಇದ್ದಿತ್ತೆಂದು ತಿಳಿದುಬರುತ್ತದೆ.[೧೫]

೨. ಸೂಕ್ಷ್ಮ ಶಿಲಾಯುಗ

ಹಳೇಶಿಲಾಯುಗ ಮತ್ತು ನವಶಿಲಾಯುಗದ ನಡುವಿನ ಕಾಲಘಟ್ಟವನ್ನು ಸೂಕ್ಷ್ಮ ಶಿಲಾಯುಗ ಅಥವಾ ಮಧ್ಯ ಶಿಲಾಯುಗ ಎಂದು ಕರೆಯುತ್ತಾರೆ.[೧೬] ಗ್ರೀಕ್ ಭಾಷೆಯ **ಮೆಸೋ** ಎಂದರೆ ಸೂಕ್ಷ್ಮ**ಲಿಥಿಕ್** ಎಂದರೆ ಶಿಲೆ ಎಂಬ ಅರ್ಥಗಳಿವೆ. ಈ ಕಾಲದಲ್ಲಿ ಬಳಸಿದ ಆಯುಧಗಳು ಆಕಾರ ಮತ್ತು ಗಾತ್ರದಲ್ಲಿ ಬಹಳಷ್ಟು ಚಿಕ್ಕವಿರುವ ಕಾರಣ ಈ ಕಾಲವನ್ನು ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗಿದೆ. ಈ ಕಾಲದ ಮಾನವನನ್ನು **"ಹಂಟರ ಫಿಶರ್ ಮಾನವ"** ಎಂದು ಕರೆಯುತ್ತಾರೆ.

ಜುಮ್ಮೋಬನಹಳ್ಳಿ, ಓಬಳಾಪುರ, ಸಿಡೀಗಲ್ಲು, ಗುಡೇಕೋಟೆ, ಕರಡಿಹಳ್ಳಿ ನೆಲೆಗಳು ಪ್ರಮುಖವಾಗಿ ಕಂಡುಬರುತ್ತವೆ. ೧೯೯೯ ರಲ್ಲಿ ಹೆಚ್.ತಿಪ್ಪೇಸ್ವಾಮಿ ಯವರ ಸಿಡೆಗಲ್ಲು ಗ್ರಾಮದ ಹಿರೇಹಳ್ಳದ ದಂಡೆಯಲ್ಲಿ ಈ ಸಂಸ್ಕೃತಿಯ ಕೆಲವು ಸೂಕ್ಷ್ಮಶಿಲೊಪಕರಣಗನ್ನು ಪತ್ತೆ ಹಚ್ಚಿದ್ದಾರೆ. ಕೂಡ್ಲಿಗಿ ತಾಲೂಕಿನ ಕರಡಿಹಳ್ಳಿ ಸಮೀಪ ಈಶ್ಯಾನ್ಯ ದಿಕ್ಕಿನ ಕರಡಿಗುಡ್ಡದ ಬಳಿ ಈ ಸಂಸ್ಕೃತಿಗೆ ಸೇರಿದ ಕಪ್ಪು ಶಿಲೆಯಿಂದ ತಯಾರಿದ ಎರಡು ಕೈಗೊಡಲಿ ಶೋಧಿಸಿದ್ದಾರೆ.[೧೭]

ಈ ಸಂಸ್ಕೃತಿಯ ಹಂತದಲ್ಲಿ ಮಾನವನ ಅಲೆಮಾರಿ ಜೀವನ ಬಿಟ್ಟು ಒಂದಡೆ ನೆಲೆ ನಿಂತಿದ್ದು ಬೇಟೆಯಾಡುವುದು ಮೀನಗಾರಿಕೆ, ಅಹಾರ ಸಂಗ್ರಹಣೆ ಜೊತೆಗೆ ಆಹಾರ ಬೆಳೆಗಳ ಉತ್ಪಾದನೆಯನ್ನು ಆರಂಭಿಸಿದನು ಆದ್ದರಿಂದ ಈ ಕಾಲವನ್ನು ಮಾನವನ ಸ್ಥಿತ್ಯಂತರದ ಹಂತ ಎಂದು ಗುರುತಿಸಿಕೊಳ್ಳಲಾಗಿದೆ. ಈ ಹಂತದಲ್ಲಿ ಚಾರ್ಟ, ಜಾಸ್ಪರ್, ಅಗೇಟ್, ಚಾಲ್ಸಿಡೋನಿ ಕ್ರಿಸ್ಟಲ್ ಮುಂತಾದ ಸೂಕ್ಷ್ಮ ಶಿಲಾಯುಧಗಳನ್ನು ಕಾಣಬಹುದು.

ಈ ಸಂಸ್ಕೃತಿಯ ಶಿಲೋಪಕರಣಗಳು ಸುರಪುರ ದೋಅಬ್, ಬೆಂಗಳೂರು ಮತ್ತು ಚಿತ್ರದುರ್ಗ ಜಿಲ್ಲೆ ಕೃಷ್ಣ ನದಿ ಪಾತ್ರ ದಕ್ಷಿಣ ಕನ್ನಡ ಜಿಲ್ಲೆಯ ಮಾಣಿ ಮತ್ತು ಉಪ್ಪಿನ ಅಂಗಡಿ, ಬೀದರ ಜಿಲ್ಲೆಯ ಮಾಂಜ್ರ ಕಾರಂಜಾ ಕಣಿವೆ ಪ್ರದೇಶ ಮಲೆನಾಡು ಅರೆಮಲೆನಾಡು ಪ್ರದೇಶ ದಾವಣಗೆರೆ ಶಿವಮೊಗ್ಗ ಚಿಕ್ಕಮಗಳೂರು ಹಾಸನ ತುಮಕೂರು ಶಿಂಷಾ, ಪೆನ್ನಾರ ನದಿ ಪ್ರಾಂತಗಳಲ್ಲಿ ಕಾಣಬಹುದು. ಈ ಕಾಲಕ್ಕೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ನೆಲೆಯಲ್ಲಿ ಉಪಕರಣ ತಯಾರಿಸುವ ಕೈಗಾರಿಕೆ ನೆಲೆಯೊಂದು ಪತ್ತೆ ಹಚ್ಚಿದರು ಮತ್ತು ಬಳ್ಳಾರಿ ಸಮೀಪದ ಮೋಕ ರಸ್ತೆಯಲ್ಲಿರುವ ಬಂಗಲೆ ತೋಟದ ಉಪಕರಣಗಳು ಕಂಡು ಬಂದವು.[೧೮] ಈ ಕಾಲಕ್ಕೆ ಸಂಬಂಧಿಸಿದಂತೆ ಹಂಪಿ, ಕುಡುತಿನಿ, ಸಂಗನಕಲ್ಲು, ತಿಮ್ಮಲಾಪೂರ ಅಪ್ಪಲಾಪುರ,

ಅಯ್ಯನಹಳ್ಳಿ ತೋರಣಗಲ್ಲು ಮಲ್ಲಾಪುರ ರಾಂಪುರ ಮಾಡಲಗೆರೆ ಮುಂತಾದ ಸ್ಥಳಗಳಲ್ಲಿ ಈ ಹಂತದ ನೆಲೆಗಳನ್ನೂ ವಿದ್ವಾಂಸರು ಬೆಳಕಿಗೆ ತಂದಿದ್ದಾರೆ.

**೩. ನವಶಿಲಾಯುಗ**

ಮಾನವನ ತನ್ನ ಅವಶ್ಯಕತೆಗೆ ತಕ್ಕಂತೆ ಆಯುಧೋಪಕರಣಗಳನ್ನು ಉಜ್ಜಿ ನೆಯಗೊಳಿಸಿ ಅದರ ಸೌಂದರ್ಯವನ್ನು ವೃದ್ಧಿಸಿದ್ದರಿಂದ ಈ ಯುಗವನ್ನು ನವಶಿಲಾಯುಗ ಎಂದು ಕರೆಯಲಾಗಿದೆ.ಗ್ರೀಕ್ ಭಾಷೆಯಲ್ಲಿ **"ನಿಯೋಲಿಥಿಕ್"** ಎನ್ನುವರು. **ನಿಯೋ** ಎಂದರೆ ಹೊಸದು **ಲಿಥಿಕ್** ಎಂದರೆ ಶಿಲೆ ಎಂಬ ಅರ್ಥವಿದೆ. ಈ ಹಂತದಲ್ಲಿ ಮಾನವನು ಅಲೆಮಾರಿ ಜೀವನ ತೊರೆದು ಒಂದಡೆ ನೆಲೆಸಿ ಬೇಸಾಯ ಪಶುಪಾಲನೆ ಆರಂಭಿಸಿ ಅದರ ಉತ್ಪಾದನೆಯಲ್ಲಿ ತೊಡಗಿ ನಿಸರ್ಗವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳಲು ಪ್ರಯತ್ನಸಿದನು. **'ಗೋಲ್ಡನ್ ಚೈಲ್ಡ್'**ರವರು ಈ ಕಾಲವನ್ನು ಕ್ರಾಂತಿಕಾರಕ ಕಾಲಘಟ್ಟ ಎಂದು ಕರೆದಿದ್ದಾರೆ.[೧೯] ಬಳ್ಳಾರಿ ಜಿಲ್ಲೆಯಲ್ಲಿ ೬೦ ನೆಲೆಗಳನ್ನು ಪುರಾತತ್ವಜ್ಞರು ಇದುವರೆಗೆ ಗುರುತಿಸಿದ್ದಾರೆ, ಅವುಗಳಲ್ಲಿ ಸಂಗನಕಲ್ಲು ಪ್ರಮುಖವಾಗಿದೆ.[೨೦]

ಅಪ್ಪೇನಹಳ್ಳಿ ಬೆಳಗಟ್ಟ, ಟಿ.ಕಲ್ಲಹಳ್ಳಿ, ಸಿಡೇಗಲ್ಲು, ನರಸಿಂಹನಗಿರಿ ಪೇಟೆನಹಳ್ಳಿ[೨೧] ರಾಮದುರ್ಗ, ಕರಡಿಹಳ್ಳಿ, ಹುರುಳಹಾಳ, ಗುಡೇಕೋಟೆ. ಜರಿಮಲೆ ಈ ಸಂಸ್ಕೃತಿಗೆ ಸೇರಿದ ಪ್ರಮುಖ ನೆಲೆಗಳನ್ನು ಪತ್ತೆ ಹಚ್ಚಿದ್ದಾರೆ ಒಟ್ಟಿನಲ್ಲಿ ಈ ಸಂಸ್ಕೃತಿಯ ಕಾಲಮಾನವನ್ನು ವಿವಿಧ ಅಂತರ ವೈಜ್ಞಾನಿಕ ಸಂಶೋಧನೆಯ ಮೂಲಕ ನಿರ್ಧರಿಸಲಾಗಿದ್ದು ಕ್ರಿ.ಪೂ. ೨,೦೦೦ ದಿಂದ ೧೦,೦೦೦ ದವರೆಗೆ ಅಸ್ತಿತ್ವದಲ್ಲಿತ್ತು ಎಂದು ತಿಳಿಯಲಾಗಿದೆ.

**೪. ಶಿಲಾ-ತಾಮ್ರಯುಗ ಸಂಸ್ಕೃತಿ**

ನೂತನ ಶಿಲಯುಗ ಸಂಸ್ಕೃತಿಯ ನಂತರ ವಿಕಾಸಗೊಂಡ ಹಂತ ಶಿಲಾ ತಾಮ್ರಯುಗ ಸಂಸ್ಕೃತಿಯಾಗಿದೆ. ಮಾನವನು ಕಲ್ಲನ್ನು ಹೊರತು ಪಡಿಸಿ ಮೊಟ್ಟ ಮೊದಲ ಬಾರಿಗೆ ಬಳಸಿದ ಲೋಹ ತಾಮ್ರವಾದ್ದರಿಂದ ಈ ಕಾಲ ಘಟ್ಟವನ್ನು ಶಿಲಾ-ತಾಮ್ರಯುಗ ಸಂಸ್ಕೃತಿ ಎಂದು ಕರೆಯಲಾಗುತ್ತದೆ.[೨೨] ಈ ಕಾಲದಲ್ಲಿ ಮಾನವ ತಾಮ್ರದ ಅದಿರಿರಿಂದ ಲೋಹವನ್ನು ತಯಾರಿಸಿ ಅದರಿಂದ ಆಭರಣ, ಗೊಂಬೆ, ಆಯುದ್ಧ ಉಪಕರಣ ಮೊದಲಾದ ವಸ್ತುಗಳನ್ನು ತಯಾರು ಮಾಡಲಾಗುತ್ತಿತ್ತು. ಈ ಹಂತದ ಜನ ಜೀವನದಲ್ಲಿ ಕಾಣುವ ಖಚಿತ ಬೆಳವಣಿಗೆ ಎಂದರೆ

ಶಿಲಾಯುಧಗಳ ಜೊತೆಗೆ ತಾಮ್ರ ಅಥವಾ ಕಂಚಿನ ಉಪಕರಣಗಳ ತಯಾರಿಸುವ ತಂತ್ರಗಾರಿಕೆ ಬೆಳಕಿಗೆ ಬಂದಿದೆ.

ಓಬಳಾಪುರ, ಸಂಗನಕಲ್ಲು, ಕುರುಗೋಡು, ಕಪ್ಪಗಲ್ಲು, ವೆಂಕಟಾಪುರ, ಹಂಪಿ, ಬೆಳಗಲ್ಲು, ಬೆಳಗೋಡು, ಹಲಕುಂದಿ, ತೆಕ್ಕಲಕೋಟೆ ಮುಂತಾದವುಗಳಲ್ಲಿ ಈ ಸಂಸ್ಕೃತಿಯ ಅವಶೇಷಗಳು ದೊರಕಿವೆ. ಕಾನಾಹೊಸಹಳ್ಳಿ ಪರಿಸರದ ಕಲ್ಲಹಳ್ಳಿಯಲ್ಲಿಯು ಸಹ ಈ ಸಂಸ್ಕೃತಿಯ ಉಪಕರಣ, ಮಡಿಕೆ ಭಾಗಗಳು ಹಾಗೂ ವರ್ಣ ಚಿತ್ರಗಳನ್ನು ಪುರಾತತ್ವಜ್ಞರು ಶೋಧಿಸಿದ್ದಾರೆ ಅಪ್ಪಯ್ಯನಹಳ್ಳಿಯ ಗವಿಗಳಲ್ಲಿ ವರ್ಣಚಿತ್ರಗಳು ಕಂಡುಬರುತ್ತದೆ.[೨೩]

**೫. ಬೃಹತ್ ಶಿಲಾಯುಗ ಸಂಸ್ಕೃತಿ**

ಭಾರತದ ಪ್ರಾಗಿತಿಹಾಸದ ಅಧ್ಯಯನದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿ ಅಧ್ಯಯನವು ಮಹತ್ವ ಪಡೆದುಕೊಂಡಿದೆ. ನವಶಿಲಾಯುಗದ ಪೀಳಿಗೆ ಒಂದು ಕಡೆ ನಿಂತು ಆರಂಭಿಕ ಕೃಷಿಯಲ್ಲಿ ತೊಡಗಿ ಬೃಹತ್ ಶಿಲಾಯುಗದ ಪೀಳಿಗೆ ಅದರಲ್ಲಿ ಯಶಸ್ವಿಯನ್ನು ಪಡೆದು ಸ್ವಾವಲಂಬಿಯಾಗಿ ಬದುಕುವುದನ್ನು ಕಲಿತುಕೊಂಡನು. ಬೃಹತ್ ಶಿಲಾಯುಗ ಸಂಸ್ಕೃತಿ ಎಂಬ ಕನ್ನಡ ಪದವು ಆಂಗ್ಲ ಭಾಷೆಯ ಮೆಗಾಲಿಥಿಕ್ ಕಲ್ಚರ್ ಎಂಬ ಪದಕ್ಕೆ ಸಮವಾಗಿದೆ, ಗ್ರೀಕ್‌ನ ಮೆಗಾ ಎಂದರೆ ಬೃಹತ್ ಲಿಥಿಕ್ ಎಂದರೆ ಶಿಲೆ(ಕಲ್ಲು) ಎಂದರ್ಥವಾಗಿದೆ.[೨೪] ಈ ಕಾಲದ ಜನರು ಮರಣ ಹೊಂದಿದಾಗ ವ್ಯಕ್ತಿಯ ಶವವನ್ನು ದೊಡ್ಡ ದೊಡ್ಡ ಕಲ್ಲುಗಳನ್ನು ಬಳಸಿ ಕಲ್ಗೋರಿಗಳನ್ನು ನಿರ್ಮಿಸಿ ಅದರಲ್ಲಿಟ್ಟು ಹೂಳುತ್ತಿದ್ದರಿಂದ ಈ ಸಂಸ್ಕೃತಿಗೆ ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಕರೆಯಾಗಿದೆ.

'ಭಾರತದಲ್ಲಿ ಪ್ರಪ್ರಥಮ ಬಾರಿಗೆ ೧೮೨೩ ರಲ್ಲಿ ಬ್ಯಾಬೆರಾಗಟನ್‌ರವರು ಕೇರಳದ ಕರಾವಳಿ ಪ್ರದೇಶದಲ್ಲಿ ಅವಶೇಷಗಳನ್ನು ಪತ್ತೆ ಹಚ್ಚುವುದರ ಮೂಲಕ ಬೃಹತ್ ಶಿಲಾಯುಗ ಸಂಸ್ಕೃತಿ ಅಧ್ಯಯನ ಆರಂಭ ಮಾಡಿದರು.[೨೫] ಕರ್ನಾಟಕದಲ್ಲಿ ಸಹ ಪ್ರಥಮ ಬಾರಿಗೆ ಮೆಡೋಸ್ ಟೇಲರ್ ಮತ್ತು ಮೊಗ್ಲಿಂಗ್ ಮೊದಲಾದವರು ೧೮೫೧ ರಿಂದ ೧೮೬೧ ರವರೆಗೆ ಗುಲ್ಬರ್ಗ ಬಳ್ಳಾರಿ ರಾಯಚೂರು ಜಿಲ್ಲೆಗಳಲ್ಲಿ ಈ ಸಂಸ್ಕೃತಿಯನ್ನು ಪತ್ತೆ ಹಚ್ಚಿದ್ದಾರೆ. ಕೆ.ಬಿ. ಶಿವತಾರಕ ರವರು ಕೂಡ್ಲಿಗಿ ತಾಲೂಕ ಈ ಸಂಸ್ಕೃತಿ ಸಂಬಂಧ ಪಟ್ಟಂತೆ ನಾಲ್ಕು ನೆಲೆಗಳನ್ನು ಗುರುತಿಸಿದ್ದಾರೆ. ಅವುಗಳೆಂದರೆ ಕುಮತಿ, ತಿಮ್ಮಲಾಪುರ, ಹಳಸಗ್ರಾಮ, ಹುಲಿಕುಂಟೆ ಎನ್ನಬಹುದು.

ಕಾನಾಹೊಸಹಳ್ಳಿ ಹೋಬಳಿಯ ಪರಿಸರದಲ್ಲಿ ಕಲ್ಲಹಳ್ಳಿ, ಮಾಲೆಹಳ್ಳಿ, ತಿಪ್ಪೇಹಳ್ಳಿ, ಓಬಳಾಪುರ, ಸುಣ್ಣಮುರಡಿ ಕುಮತಿ, ಹುರುಳಯಾಳ ಬೃಹತ್ ಶಿಲಾಯುಗ ಸಂಸ್ಕೃತಿ ಪ್ರಮುಖ ನೆಲೆಯಾಗಿದೆ.

**ಕಾನಾಹೊಸಹಳ್ಳಿ ಹೋಬಳಿಯ ವ್ಯಾಪ್ತಿಯಲ್ಲಿ ಬರುವ ಪ್ರಾಗೈತಿಹಾಸಿಕ ನೆಲೆಗಳು**

**ಕಲ್ಲಹಳ್ಳಿ**

ಕಾನಾಹೊಸಹಳ್ಳಿಯಿಂದ ೧೨ ಕಿ.ಮೀ ದೂರದಲ್ಲಿರುವ ಹಾಗೂ ಕೂಡ್ಲಿಗಿ ತಾಲೂಕಿನ ಗಡಿಗ್ರಾಮವಾದ ತೊರೆ ಕಲ್ಲಹಳ್ಳಿಯೂ ಚಿನ್ನಹಗರಿ ನದಿ ಪರಿಸರದ ಪ್ರಾಗೈಹಾಸಿಕ ನೆಲೆಯಾಗಿದೆ. ಚಿನ್ನಹಗರಿ ಅತಿ ಪುರಾತನ ಕಾಲದಿಂದಲೂ ಧಾರ್ಮಿಕ, ಸಾಂಸ್ಕೃತಿಕ, ಚಾರಿತ್ರಿಕವಾಗಿ ಮಹತ್ವ ಪಡೆದುಕೊಂಡಿದೆ. ಮಳೆಗಾಲದಲ್ಲಿ ಮಾತ್ರ ಹರಿಯುವುದರಿಂದ ಇದನ್ನು ದಿವಂಗತ ಹಲ್ಲೂರು ಶ್ರೀನಿವಾಸ ಜೋಯಿಸರು ಈ ನದಿಯನ್ನು ಬಡನದಿ ಅಥವಾ ಪಾಪವಿನಾಶಿನಿ ಎಂದು ಸಹ ಕರೆಯುತ್ತಾರೆ.

ಈ ನದಿಯು ಚಿತ್ರದುರ್ಗ ಜಿಲ್ಲೆಯ ಪಶ್ಚಿಮಕ್ಕೆ ಬೆಟ್ಟದ ಓಬಳಾದೇವರ ಗುಡ್ಡದಲ್ಲಿ ಹುಟ್ಟಿ ಉಪ್ಪನಾಯಕನಹಳ್ಳಿ, ನಂದಿಪುರ, ಸೊಂಡೆಕೊಳ್ಳ, ಗೊಡಬನಹಾಳು, ದೇವರಪುರದ ಹಟ್ಟಿ ಹಲ್ಲೂರು ಸಿಂಗಾಪುರ ಹಿರೆಗುಂಟನೂರು ಕ್ಯಾಸನಪುರ ಮೂಲಕ ಕಾತ್ರಾಳುಕೆರೆ ಸೇರುತ್ತದೆ. ನಂತರ ವಡ್ಡನಹಳ್ಳಿ, ಚಿಪ್ಪಿನಕೆರೆ, ಚಿಕ್ಕಗೊಂಡನಹಳ್ಳಿಯಿಂದ ಸಂಗನೆಹಳ್ಳಿಕೆರೆ ಸೇರುತ್ತದೆ. ಅಲ್ಲಿಂದ ಮುಂದೆ ದೋಣಿಹಳ್ಳಿ ಮಲ್ಲಾಪುರದ ಮೂಲಕ ಹರಿದುಕೊಂಡು ಕಾನಾಹೊಸಹಳ್ಳಿ ಹೋಬಳಿ ವ್ಯಾಪ್ತಿಯಲ್ಲಿ ಬರುವ ಕಲ್ಲಹಳ್ಳಿಯನ್ನು ಪ್ರವೇಶಿಸಿ ನಂತರ ತಿಪ್ಪೇಹಳ್ಳಿ, ಹೊಡೇಂ, ಕುಮತಿ ಮುಂದುವರಿದು ರಂಗಯ್ಯನದುರ್ಗ ಜಲಾಶಯ ಸೇರುತ್ತದೆ.

ಕಲ್ಲಹಳ್ಳಿಯಲ್ಲಿ ಈ ನದಿಗೆ ಸ್ಥಳೀಯರು ಜಿನಿಗಿಹಳ್ಳ, ಚಿನ್ನಹಗರಿ, ಚಿಕ್ಕಹಗರಿ, ಸಣ್ಣಹಗರಿ ಎಂತಲೂ ಕರೆಯುತ್ತಾರೆ. ಜಿನಿಗಿಹಳ್ಳಕ್ಕೆ ಶಾಸನಗಳಲ್ಲಿ " ಹನೆಯ ತೊರೆ" ಎಂಬ ಉಲ್ಲೇಖವಿದೆ. ಹಾಗಾಗಿ ಮೊದಲು ತೊರೆಕಲ್ಲಹಳ್ಳ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಕಾಲಾ ನಂತರ ಇತ್ತೀಚಿಗೆ ಟಿ. ಕಲ್ಲಹಳ್ಳಿ ಎಂದು ಕರೆಯುತ್ತಾರೆ.

ಪೂಟ್ ಆರ್.ಬಿ ಇವರು ೧೯೧೬ ರಲ್ಲಿ ಮದ್ರಾಸಿನ **"ಇಂಡಿಯನ್ ಪ್ರೀ ಹಿಸ್ಟರಿಕ ಅಂಡ್ ಪೋಟೋ ಹಿಸ್ಟರಿಕ ಆಂಟಿಕ್ವಟಿಸ್"** ಎಂಬ ವರದಿಯಲ್ಲಿ ಕೂಡ್ಲಿಗಿ ತಾಲೂಕಿನ ಪೂರ್ವಇತಿಹಾಸವನ್ನು ಕುರಿತಂತೆ ಬೆಳಗೆಟ್ಟ, ರಾಮದುರ್ಗ, ಕಲ್ಲಹಳ್ಳಿ ಗ್ರಾಮಗಳು ನವಶಿಲಾಯುಗದ ನೆಲೆಗಳೆಂದು ಗುರುತಿಸಿ ಈ ಪ್ರದೇಶಗಳ ಪ್ರಾಗಿತಿಹಾಸವನ್ನು ತಿಳಿಸಿದ್ದಾರೆ.

**ಬೂದಿದಿಬ್ಬ**

ಕಾನಾಹೊಸಹಳ್ಳಿ ಹೋಬಳಿಯಿಂದ ೧೩ ಕಿ.ಮೀ ದೂರದ ಟಿ. ಕಲ್ಲಹಳ್ಳಿ ಗ್ರಾಮದ ಆಗ್ನೇಯಕ್ಕೆ ಚಿನ್ನಹಗರಿ ಉಪನದಿಯ ಬಲದಂಡೆಯ ಮೇಲೆ ಹಾಳೂರು ಇದ್ದು. ಇದು ಸುಮಾರು ಐದರಿಂದ ಆರು ಎಕರೆ ವಿಸ್ತೀರ್ಣವುಳ್ಳ ನವಶಿಲಾಯುಗದ ಬೂದಿದಿಬ್ಬದ ರಚನೆ ಕಂಡುಬರುತ್ತದೆ. ಇಲ್ಲಿ ಬೂದಿಯ ಮೃತ್ಪಾತ್ರೆಗಳು, ಜಾನುವಾರುಗಳ ದವಡೆ, ಕೊಂಬು, ಮೂಳೆಗಳೂ ಹಾಗೂ ಇದೇ ಕಾಲದ ಉಪಕರಣಗಳು ದೊರತಿವೆ. ಮಣ್ಪಾತ್ರಗಳು ಚೂರುಗಳ ಮೇಲೆ ವರ್ಣಚಿತ್ರಗಳಿವೆ. ಸ್ಥಳಿಯರು ಈ ಬೂದಿದಿಬ್ಬವನ್ನು ಬೂದುಂಗಡ್ಡೆ ಎಂದು ಪ್ರಸ್ತುತ ಚಾಲ್ತಿಯಲ್ಲಿ ಕರೆಯುತ್ತಾರೆ. ಪ್ರಸ್ತುತ ಈ ನೆಲೆಯು ಜಾಲಿಮರಗಳಿಂದ ಆವೃತವಾಗಿ ಕಾಣದಂತಾಗಿದೆ. ಪ್ರಾಗೈತಿಹಾಸಿಕ ಮಹತ್ವ ಪಡೆದುಕೊಂಡಿದ್ದು ನವಶಿಲಾಯುಗದ ಪ್ರಮುಖ ನೆಲೆಯಾಗಿದೆ.

**ಮಾಳೇನಹಳ್ಳಿ**

ಕಾನಾಹೊಸಹಳ್ಳಿ ೧೦ ಕಿ.ಮೀ ದೂರದಲ್ಲಿರುವ ಮಾಳೇನಹಳ್ಳಿ ಗ್ರಾಮದ ಉತ್ತರ ದಿಕ್ಕಿಗೆ ಕೆರೆಯಂಗಳದಲ್ಲಿರುವ ಶಿಲಾ ಸಮಾಧಿಗೆ ಸ್ಥಳೀಯರು ಕೆರೆಯಂಗಳ ಬಸವಣ್ಣ ಎಂದು ಕರೆಯುತ್ತಿದ್ದು. ಇದು ಬೃಹತ್ ಶಿಲಾಯುಗದ ಶಿಲಾಗೋರಿಯಾಗಿದೆ. ಸಂಪೂರ್ಣವಾಗಿ ಹಾಳಾಗಿದ್ದು. ಆಯತಾಕಾರವಾಗಿದ್ದು ಸ್ವಸ್ತಿಕ ರೂಪದಲ್ಲಿದೆ. ಇದರ ಉತ್ತರ ದಕ್ಷಿಣ ಮತ್ತು ಪಶ್ಚಿಮದಲ್ಲಿ ನೆಟ್ಟಿರುವ ಕಲ್ಲುಚಪ್ಪಡಿಗಳಿದ್ದು. ಇವು ಅಸ್ಥವ್ಯಸ್ಥವಾಗಿವೆ ಎತ್ತರದ ಕಲ್ಲುಚಪ್ಪಡಿಯು ೧.೧೦ ಮೀಟರ ಉದ್ದ ೦.೬೦ ಮೀಟರ್ ಎತ್ತರ ೦.೦೫ ಮೀಟರ್ ದಪ್ಪವನ್ನು ಹೊದಿದ್ದು. ದಕ್ಷಿಣದ ಕಲ್ಲುಚಪ್ಪಡಿಯು ೫.೩೦ ಮೀಟರ್ ಉದ್ದ, ೦.೮೦ ಮೀಟರ್ ಉತ್ತರ ಮತ್ತು ೦.೧೦ ಮೀಟರ್ ದಪ್ಪವನ್ನು ಹೊಂದಿದೆ. ಪಶ್ಚಿಮದ ಕಲ್ಲುಚಪ್ಪಡಿಯು ೧.೩೦ ಮೀಟರ್ ಉದ್ದ, ೦.೪೦ ಮೀಟರ ಎತ್ತರ ಮತ್ತು ೦.೧೦ ಮೀಟರ್ ದಪ್ಪವನ್ನು ಹೊಂದಿದೆ.

ಇದರ ಮೇಲ್ಭಾಗದ ಕಲ್ಲುಚಪ್ಪಡಿಯು ಹಾಳಾಗಿದ್ದು ಪ್ರಸ್ತುತದಲ್ಲಿ ಈ ಕಲ್ಲುಚಪ್ಪಡಿಯು ಇರುವುದಿಲ್ಲ. ಇದರ ಪೂರ್ವದಲ್ಲಿ ಕಲ್ಲು ಚಪ್ಪಡಿಯನ್ನು ನೆಟ್ಟರುವುದುದಿಲ್ಲ. ಇದರ ಸುತ್ತಲೂ ಚಚೌಕಕಾರದಲ್ಲಿ ೨.೩೦ ಮೀಟರ ಉದ್ದ ಮತ್ತು ೨.೩೦ ಮೀಟರ ಅಗಲವುಳ್ಳ ಕಲ್ಲಿನಿಂದ ವೇದಿಕೆಯನ್ನು ಹೊಂದಿದೆ. ಇದರ ಹಿಂಭಾಗದಲ್ಲಿ ವೃತ್ತಾಕಾರದ ಆಳತೆಗಲ್ಲುಗಳನುಳ್ಳ ವೇದಿಕೆಯ

ಮಧ್ಯದಲ್ಲಿ ಶಿಲಾಸಮಾಧಿಯ ಅವಶೇಷಗಳ ಕಂಡುಬರುತ್ತದೆ. ಇದನ್ನು ನಿಧಿಗಳ್ಳರು ಹಾಳು ಮಾಡಿದ್ದಾರೆ ಬೃಹತ್ ಶಿಲಾಯುಗದ ಪ್ರಮುಖ ನೆಲೆಯಾಗಿದೆ.

**ಮಾಳೇಹಳ್ಳಿ**

ಕಾನಾಹೊಸಹಳ್ಳಿ ಗ್ರಾಮದಿಂದ ೧೦ ಕಿ.ಮೀ ದೂರದಲ್ಲಿರುವ ಈ ನೆಲೆಯು ಕಲ್ಲಹಳ್ಳಿಯ– ಮಹಜರ(ಉಪಗ್ರಾಮ)ವಾಗಿದೆ. ಇದು ಬಯಲು ಪ್ರದೇಶದಿಂದ ಕೂಡಿದೆ. ಮಾಳೇಹಳ್ಳಿಯ ಕೆರೆಯ ಉತ್ತರಕ್ಕೆ ಹಾಗೂ ತಿಪ್ಪೇಹಳ್ಳಿಗೆ ಹೋಗುವ ದಾರಿಯ ಎಡಬದಿಯಲ್ಲಿ ಕಾಣುವ ಎತ್ತರದ ಹೆಬ್ಬಂಡೆಗಳಿದ್ದು ಇವುಗಳನ್ನು "ದವನಪ್ಪ ಗುಂಡು" ಎಂದು ಕರೆಯುಲಾಗುತ್ತದೆ. ಈ ಬಂಡೆಯ ಮಧ್ಯಭಾಗದಲ್ಲಿ ಕುಟ್ಟಿ ರಚಿಸಿದ ಜಿಂಕೆ ಮತ್ತು ಹಾವಿನ ಚಿತ್ರಗಳಿವೆ. ಜಿಂಕೆಯ ಚಿತ್ರವು ಉದ್ದವಾದ ಬಾಗಿದ ಕೋಡುಗಳಿಂದ ಗಿಡ್ಡ ದೇಹವನ್ನು ಹಾಗೂ ಕಾಲುಗಳು ಅಸ್ಪಷ್ಟವಾಗಿರುಂತೆ ಚಿತ್ರಸಲಾಗಿದೆ. ದವನ ಎಂಬ ಪದವು ಸುವಾಸನೆಯ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ ಹಬ್ಬದ ಹೂವು ಎಂಬ ಅರ್ಥವನ್ನು ಸೂಚಿಸುತ್ತದೆ.

**ತಿಪ್ಪೇಹಳ್ಳಿಯ ಹಳ್ಳೂರು**

ಕೂಡ್ಲಿಗಿ ಪಟ್ಟಣದಿಂದ ೪೮ ಕಿ.ಮೀ ಹಾಗೂ ಕಾನಾಹೊಸಹಳ್ಳಿ ಹೋಬಳಿ ವ್ಯಾಪ್ತಿಯಲ್ಲಿರುವ ಈ ಗ್ರಾಮಾವು ೧೪ ಕಿ.ಮೀ ದೂರದಲ್ಲಿದೆ. ತಿಪ್ಪೇಹಳ್ಳಿಯ ಸ್ಥಳೀಯರು ಈ ಗ್ರಾಮಾವನ್ನು ಹಳ್ಳೂರು ಎಂದು ಕರೆಯುತ್ತಾರೆ. ನೂತನ ಶಿಲಾಯುಗ ತಾಮ್ರಯುಗ ಬೃಹತ್ ಶಿಲಾ ಸಂಸ್ಕೃತಿಯ ನೆಲೆಯನ್ನು ಮತ್ತು ಅದೆ ಕಾಲಾದ ಉಪಕರಣ ಮತ್ತು ಮಡಿಕೆ ಭಾಗಗಳು ಮತ್ತು ವರ್ಣ ಚಿತ್ರಗಳನ್ನು ಶೋಧಿಸಲಾಗಿದೆ, ಇದ್ದರಿಂದ ಈ ನೆಲೆಗಯಲ್ಲಿ ಪ್ರಾಗೈತಿಹಾಸಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ.

**ತಿಪ್ಪೇಹಳ್ಳಿ**

ಕಾನಾಹೊಸಳ್ಳಿ ಹೋಬಳಿಯಿಂದ ಸುಮಾರು ೧೪ ಕಿ.ಮೀ ದೂರದ ಕಂದಾಯ ಗ್ರಾಮವಾದ ತಿಪ್ಪೇಹಳ್ಳಿಯು ನವಶಿಲಾಯುಗದ ನೆಲೆಯಾಗಿದೆ. ಈ ನೆಲೆಯಯು ಗ್ರಾಮದ ಹಿಂಭಾಗದ ಬೆಟ್ಟಗುಡ್ಡಗಳಿಂದ ಕೂಡಿದೆ. ಸ್ಥಳಿಯರು ಈ ನೆಲೆಯನ್ನು ಮಟ್ಟಿ ಎಂದು ಸಹ ಕರೆಯುತ್ತಾರೆ. ಇದರ ವಿಸ್ತೀರ್ಣವನ್ನು ನೋಡುವುದಾದರೆ ಸರ್ವೆ ನಂಬರ ೧೪೨/೨ ೫೫ ಎಕರೆ ೭೫ ಸೆಂಡ್ಸ್ ಅನಾಧೀನ ಸರ್ಕಾರ ಎಂದು ಉಲ್ಲೇಖವಿದೆ.[೨೭] ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಪ್ಪು ಮತ್ತು ಕೆಂಪು ಮಡಿಕೆ ಚೂರುಗಳ ದೊರಕಿವೆ ಮಡಿಕೆ ಚೂರು ನಯವಾಗಿದ್ದು ವಿವಿಧ

ರೀತಿಯ ಚಿತ್ರಗಳನ್ನು ಸಹ ಕಾಣಬಹುದು. ಆಯುಧ ಉಪಕರಣಗಳು ವಸತಿಯ ಸ್ತರಗಳು ಕಾಣಬಹುದು ಇತ್ತೀಚಿಗೆ ಸ್ಥಳೀಯರು ಇಲ್ಲಿ ಸ್ತರದಲ್ಲಿರುವ ಕಲ್ಲುಗಳನ್ನು ಕಿತ್ತುಕೊಂಡು ಹೋಗಿರುವುದು ಕಂಡುಬಂದಿದೆ. ಸ್ಥಳೀಯರು ಈ ನೆಲೆಯನ್ನು ಹೊನ್ನಿನ ತಿಪ್ಪೇಹಳಿ ಎಂದು ಸಹ ಕರೆಯುತ್ತಾರೆ.

**ಸುಣ್ಣಮರಡಿ**

ಕಾನಾಹೊಸಹಳ್ಳಿ ಗ್ರಾಮದಿಂದ ೬ ಕಿ.ಮೀ ದೂರದಲ್ಲಿರುವ ಈ ಪ್ರದೇಶ ಕಾನಾಹೊಸಹಳ್ಳಿಯಿಂದ ಪಶ್ಚಿಮ ದಿಕ್ಕಿಗೆ ಇದೆ. ಇಂದು ಹಾಳೂರಾಗಿರುವ ಈ ನೆಲೆಯು ಬಯಲು ಪ್ರದೇಶವಾಗಿದ್ದು, ಕುರುಚಲು ಗಿಡಗಳಿಂದ ಕೂಡಿದೆ. ಮಳೆಗಾಲದಲ್ಲಿ ತುಂಬಿ ಹರಿಯುವ ಹಳ್ಳ ಕುಂಟೆಗಳಿಂದ ಕೂಡಿದೆ ಈ ನೆಲೆಗಳಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಶಿಲಾಗೋರಿ ಮತ್ತು ಆ ಕಾಲದ ಕಪ್ಪು-ಕೆಂಪು ವರ್ಣದ ಮಡಿಕೆಯ ಚೂರುಗಳನ್ನು ಶೋಧಿಸಲಾಗಿದೆ. ಇದರಿಂದ ಈ ನೆಲೆ ಪ್ರಾಗೈತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ.

**ಕಟ್ಟಿಂಗೆಹಳ್ಳಿ**

ಕಾನಾಹೊಸಹಳ್ಳಿ ಹೋಬಳಿ ವ್ಯಾಪ್ತಿಯಲ್ಲಿ ಬರುವ ಗ್ರಾಮ ಪಂಚಾಯತಿಯಾದ ಪೂಜಾರಹಳ್ಳಿಯಿಂದ ಸುಮಾರು ನಾಲ್ಕು ಕಿ.ಮೀ ದೂರದಲ್ಲಿನ ಈ ಹಳ್ಳಿಯು ಹಾಳೂರಿನ ನಿವೇಶನವಾಗಿದೆ. ಕಟ್ಟಿಂಗ, ಜಟ್ಟಿಂಗ, ಜಟಿಂಗ ನೆಂಬ ಮೂಲಕ ಈ ಹೆಸರು ಬಂದಿರಬಹುದು ಶಾಸನಗಳಲ್ಲಿ "ಕೆಲ್ಲ" ಜರ್ನಾಂಗದ ಬಗ್ಗೆ ಉಲ್ಲೇಖವಿರುವುದುನ್ನು ಎಂ. ವಿ. ನೇಗಿನಹಾಳರು ಪತ್ತೆ ಹಚ್ಚಿದ್ದಾರೆ, ಅದೇ ಪ್ರಭೇದಕ್ಕೆ ಸೇರಿದ ಕಟ್ಟಗರು ತಾವು ನೆಲೆಸಿರುವ ಸ್ಥಳಕ್ಕೆ ಈ ಹೆಸರು ಇಟ್ಟುಕೊಂಡಿರಬೇಕು. ಈ ನಿವೇಶನಕ್ಕೆ ದಕ್ಷಿಣಭಿಮುಖವಾಗಿ ಸ್ಥಳಕ್ಕೆ ದ್ವಾರಗಳಿದ್ದು ಪೂರ್ವಭಿಮುಖವಾಗಿ ಮನೆ ಬಾಗಿಲುಗಳಿವೆ. ಪ್ರಾಚೀನ ಮಾನವರು ನೆಲೆಸಿದ ಸ್ಥಳವಾಗಿದ್ದು ಇಲ್ಲಿ ಸುತ್ತಲೂ ಮಣ್ಣಿನಿಂದ ಏರಿದಿಬ್ಬ ಅಥವಾ ರಕ್ಷಣಾಕೋಟೆ, ಬತೇರಿಗಳಿವೆ. ಇವುಗಳ ನಡುವೆ ಬೃಹತಾಕಾರದ ಮನೆಯ ನಿವೇಶಗಳು, ಬೂದಿ, ಬಾವಿಗಳು ರುಬ್ಬುವಕಲ್ಲು, ಬೀಸುವಕಲ್ಲು ಇತರ ಅವಶೇಷಗಳು ಮತ್ತು ಉಪಕರಣಗಳು ಕಂಡುಬಂದಿವೆ.[೨೮] ಮಡಿಕೆ ಚೂರುಗಳು ಗೃಹ ಜೀವನಕ್ಕೆ ಬಳಸಿದ ಇತರ ಪರಿಕರಗಳು ಹೆಚ್ಚಾಗಿವೆ. ಕಟ್ಟಿಂಗಹಳ್ಳಿಯಿಂದ ಪೂರ್ವಕ್ಕೆ ಒಂದು ಬಾವಿ ಹಾಗೂ ದಕ್ಷಿಣಕ್ಕೆ ಮತ್ತೊಂದು ಬಾವಿ ಇದ್ದು. ಇಲ್ಲಿನ ಜನರು ನೀರಿಗಾಗಿ ಇವುಗಳನ್ನು ಬಳಿಕೆ ಮಾಡಿಕೊಂಡಿರಬಹುದು.

ಇಂತಹ ಸುವ್ಯವಸ್ಥೆಯ ಗ್ರಾಮ ವಿನಾಶ ಆಗಲಕ್ಕೆ ಕಾರಣಗಳೇನುಂಬುದು ಖಚಿತವಾಗಿ ತಿಳಿದು ಬಂದಿಲ್ಲ ಗ್ರಾಮಸ್ಥರು ತಿಳಿಸುವಂತೆ ಭಯಂಕರವಾದ ರೋಗಗಳಾದ ಕಾಲಾರ, ಪ್ಲೇಗ್ ಬಂದು ಸಾವು–ನೋವು ಸಂಭವಿಸಿದಾಗ ಈ ಸ್ಥಳವನ್ನು ತೊರೆದು ಕೆರೆದಂಡೆಯ ಹೊಲದಲ್ಲಿ ಹೋಗಿ ನೆಲೆಸಿದಂತೆ ಸುಮಾರು ೨.೩ ಕಿ.ಮೀ ಅಂತರವಿರುವ ಸಂಗನಹಳ್ಳಿಯು ಮತ್ತು ಲಂಬಾಣಿಹಟ್ಟಿ ಎಂಬ ಗ್ರಾಮಗಳು ಉದಯವಾಗಿವೆ.

**ಪಾಡೂರು ಅಥವಾ ಕರೆ ಪೂಜಾರಹಳ್ಳಿ**

ಕಾನಾಹೊಸಹಳ್ಳಿ ಹೋಬಳಿಯ ಪೂಜಾರಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಬರುವ ಈ ಊರು ಇಂದು ಹಾಳೂರಾಗಿದೆ, ಈ ನಿವೇಶನದ ಅಕ್ಕ ಪಕ್ಕದಲ್ಲಿ ರಕ್ಕರಾಯಿನೆ ಬಂಡೆ, ಕತ್ತೆ, ಮೊರೆಡಿ ಮತ್ತು ಕೊಡದಗುಡ್ಡದ ಮಾರಮ್ಮನ ನೆಲೆಗಳ ಈ ಅಡವಿಯಲ್ಲಿವೆ. ಈ ನಿವೇಶನದ ಸಮೀಪದಲ್ಲಿರುವ ಸರ್ವೆ ನಂಬರ ೧೪ ಮತ್ತು ೧೫ ರಲ್ಲಿ ಈ ಪ್ರಾಚೀನ ನಿವೇಶನವಿದೆ. ಇಲ್ಲಿ ಕೋಟೆ, ಕಂದಕ, ಬುರುಜು ಇತರೆ ಭಗ್ನಾವೇಶಷಗಳು ಪ್ರಾಚೀನತೆಯನ್ನು ಸಾಕ್ಷಿಕರಿಸುತ್ತವೆ.[೨೯] ಮನೆಯ ಸ್ತರಗಳು ಬಾವಿ, ಬೀದಿ ಹಾಗೂ ಕಪ್ಪು ಮತ್ತು ಕೆಂಪು ಮಡಿಕೆಗಳು ಪತ್ತೆ ಹಚ್ಚಲಾಗಿದೆ.

ಕ್ರಿ.ಶ ೧೫೫೦–೧೬೦೦ರ ಸುಮಾರಿಗೆ ನಾಯಕ ಜನಾಂಗದ ಜಗದ್ಗುರು ಪಶುಪಾಲಕ ಸಮುದಾಯದ ದೊರೆಯಾಗಿದ್ದು ಯರಮಂಚನಾಯಕ ತನ್ನ ಕೆಂಪಳದೊಡನೆ ಇಲ್ಲಿ ವಾಸ್ತವ್ಯ ಹೊಡಿದ್ದನೆಂದು ತಿಳಿದುಬರುತ್ತದೆ. ಗುಡೇಕೋಟೆ, ಜರಿಮಲೆ, ಪಾಳೆಗಾರರ ಆಳ್ವಿಕೆಯ ಕಾಲಕ್ಕೆ ಈ ಪ್ರದೇಶ ಒಳಪಟ್ಟಿತ್ತು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿನ ಮಾಹಿತಿ ಪ್ರಕಾರ ಈ ನಿವೇಶನವು ಅರಣ್ಯ ಇಲಾಖೆಗೆ ಸೇರಿದೂ ಅನಾಧೀನ ಶಿವ ಜಮೀನು ಎಂದು ತೋಟದ ಪೆದ್ದಓಬಯ್ಯ ಮತ್ತು ತೋಟದ ಬೋರಯ್ಯ ಅಣ್ಣ ತಮ್ಮಂದಿಗೆ ಸರ್ಕಾರ ಪಟ್ಟ ನೀಡಿದೆ. ಆದರೆ ಕಂದಕ, ಬುರುಜು ಇತರ ಅವಶೇಷಗಳಿರುವ ನಿವೇಶನವನ್ನು ಹೊರತು ಪಡಿಸಿ ಉಳಿದ ಎಲ್ಲಾ ಪ್ರದೇಶವನ್ನು ಕೃಷಿ ಮಾಡುತ್ತಾರೆ.

**ಕುಮತಿ**

ಈ ಗ್ರಾಮವು ಬಯಲು ಪ್ರದೇಶವಾಗಿದ್ದು ಸಣ್ಣ ಪುಟ್ಟ ಗುಡ್ಡಗಳನ್ನು ಕಾಣಬಹುದಾಗಿದೆ, ಸ್ವಲ್ಪ ಮಟ್ಟಿನ ಅರಣ್ಯವಿದ್ದು ಮಳೆಯ ಪ್ರಾಣ ಅಷ್ಟೇನು ಹೆಚ್ಚಾಗಿಲ್ಲ ಹಾಗೆಯೇ ಚಿನ್ನಹಗರಿ ನದಿಯು ಈ ಗ್ರಾಮದ ಸಮೀಪದಲ್ಲಿ ಹರಿದುಹೋಗುತ್ತದೆ. ೧೯೯೬ರಲ್ಲಿ ಭಾರತೀಯ ಪುರಾತತ್ವ

ಸರ್ವೇಕ್ಷಣಾ ಇಲಾಖೆ ಬೆಂಗಳೂರು ಶಾಖೆಯ ಕೆ.ಪಿ.ಪೂಣಚ್ಚ ಇವರು ನೇತೃತ್ವದಲ್ಲಿ ಹಮ್ಮಿಕೊಂಡಿದ್ದ ಗ್ರಾಮಾಂತರ ಸರ್ವೇಕ್ಷಣ ಕಾರ್ಯದಲ್ಲಿ ಈ ನೆಲೆಯನ್ನು ಅನ್ವೇಷಿಸಿ ವರದಿ ಮಾಡಲಾಯಿತು. ಒಂದು ಕಂಡಿ ಕೋಣೆಯ ಕಲ್ಗೋರಿ ಮಾನವಾಕಾರದ ಏಕಶಿಲಾ ಸಮುಚ್ಚಯಗಳು ಇವುಗಳ ಆಧಾರದ ಮೇಲೆ ಇದೊಂದು ಬೃಹತ್ ಶಿಲಾಯುಗದ ನೆಲೆ ಎನ್ನಲಾಗುತ್ತದೆ.

ಈ ಶಿಲಾಸಮಾಧಿಯ ರಚನೆಗೆ ಗ್ರಾನೈಟ್ ಶಿಲಾಯ ಐದು ಚಪ್ಪಡಿ ಕಲ್ಲುಗಳನ್ನು ಬಳಿಸಿ ನಿರ್ಮಾಣ ಮಾಡಲಾಗಿದೆ. ಇದರಲ್ಲಿ ಒಂದಕ್ಕೊಂದು ಅಭಿಮುಖವಾಗಿ ನಾಲ್ಕು ದಿಕ್ಕಿಗೆ ಕಲ್ಲುಚಪ್ಪಡಿಗಳನ್ನು ನೆಟ್ಟ ಅದರ ಮೇಲ್ಭಾಗದಲ್ಲಿ ಒಂದು ಕಲ್ಲುಚಪ್ಪಡಿಯನ್ನು ಮುಚ್ಚಳ ರೂಪದಲ್ಲಿ ಮುಚ್ಚಲು ಬಳಸಿರುತ್ತಾರೆ. ಇವುಗಳಲ್ಲಿ ಉತ್ತರ ಮತ್ತು ಪಶ್ಚಿಮ ಭಾಗದ ಎರಡು ಚಪ್ಪಡಿಕಲ್ಲುಗಳು ನಿಂತಿದ್ದು, ಉಳಿದ ಪೂರ್ವ, ದಕ್ಷಿಣ, ಮತ್ತು ಮೇಲ್ಭಾಗದ ಕಲ್ಲುಚಪ್ಪಡಿಗಳು ಬಿದ್ದಿರುತ್ತವೆ. ಇದರಲ್ಲಿನ ಉತ್ತರ ಭಾಗದ ಚಪ್ಪಡಿಕಲ್ಲಿನ ಮಧ್ಯದಲ್ಲಿರುವ ಕಂಡಿಯ ತ್ರಿಜ್ಯದಿಂದ ೧೭.೫೦ ಸೆಂ.ಮೀ ಹೊಂದಿದ ಹಾಗೂ ಇದು ೧.೯೦ ಮೀಟರ್ ಉದ್ದ ಭೂಮಟ್ಟದಿಂದ ೨.೦೦ ಮೀಟರ್ ಎತ್ತರ ಮತ್ತು ೦.೧೫ ಮೀಟರ್ ದಪ್ಪವಿದೆ. ಪಶ್ಚಿಮಭಾಗದ ಕಲ್ಲುಚಪ್ಪಡಿಯು ೨.೮೦ ಮೀಟರ್ ಉದ್ದ ಭೂಮಟ್ಟದಿಂದ ೧.೯೦ ಮೀಟರ್ ಉತ್ತರ ಮತ್ತು ೦.೧೦ ಮೀಟರ್ ದಪ್ಪವಿದೆ. ಪೂರ್ವಭಾಗದ ಕಲ್ಲುಚಪ್ಪಡಿಯು ೧.೬೦ ಮೀಟರ್ ಉದ್ದ ೨.೦೦ ಮೀಟರ್ ಅಗಲ ೦.೧೫ ಮೀಟರ್ ದಪ್ಪವಿದೆ. ಸಮಾಧಿಯ ಮೇಲ್ಭಾಗದ ಕಲ್ಲುಚಪ್ಪಡಿಯ ३.೨೦ ಮೀಟರ ಉದ್ದ३.೦೦ ಮೀಟರ್ ಅಗಲ ಮತ್ತು ೦.೧೫ ಮೀಟರ್ ದಪ್ಪವನ್ನು ಹೊಂದಿರುತ್ತದೆ. ಈ ಸಮಾಧಿಯು ನಿಧಿಗಳ್ಳರ ಮತ್ತು ಕೃಷಿ ಚಟುವಟಿಕೆಯಿಂದಾಗಿ ಹಾಳಾಗಿದೆ. ಇದನ್ನು ಸ್ಥಳೀಯರು ಬೇಟೆಯಾಡುವ ಮನೆ, ಪಾಂಡವರ ಗುಡಿ, ಮೊರೆಯರ ಕಲ್ಮನೆ ಹೀಗೆ ವಿವಿಧ ಹೆಸರುಗಳಿಂದ ಕರೆಯುತ್ತಾರೆ.

ಈ ಗ್ರಾಮದ ಕೆರೆದಂಡೆಯ ಉತ್ತರಕ್ಕೆ ಒಂದೊವರೆ ಕಿ.ಮೀ ದೂರದಲ್ಲಿರುವ ಕೆ.ಎಂ. ತಿಪ್ಪೇರುದ್ರಯ್ಯ ಎಂಬುವರ ಜಮೀನಿನಲ್ಲಿ ಈ ಮಾನವಾಕಾರದ ಏಕಶಿಲಾಸಮುಚ್ಚಯಗಳು ಇವೆ ಇವುಗಳ ಆಧಾರದ ಮೇಲೆ ಇದೊಂದು ಬೃಹತ್ ಶಿಲಾಯುಗದ ನೆಲೆ ಎನ್ನಲಾಗಿದೆ. ಈ ಸಮುಚ್ಚಯದಲ್ಲಿ ಏಳು ಮೂಲ ಸ್ಮಾರಕ ಶಿಲಾಗಳಿದ್ದು ಇವುಗಳಲ್ಲಿ ಎರಡು ಮಾತ್ರ ಸುಸ್ಥಿಯಲ್ಲಿವೆ. ಸ್ಥಳಿಯವಾಗಿ ದೊರೆಯುವ ಗ್ರಾನೈಟ್ ಶಿಲೆಯ ಅಗಲವಾದ ಶಿಲಾಫಲಕಗಳನ್ನು ಉಪಯೋಗಿಸಿ ದಕ್ಷಿಣೋತ್ತರವಾಗಿ ಯೋಜಸಲಾಗಿದೆ. ಪೂರ್ವರ್ಧಮುಖವಾಗಿರುವಂತೆ ನಿಲ್ಲಿಸಲಾಗಿದ್ದು ಈ

ಶಿಲ್ಪಗಳ ಅಳತೆ ಈ ಮುಂದಿನಂತಿದೆ. ಎಡಭಾಗದ ಶಿಲ್ಪವು ೨.೦೨ ಮೀಟರ್ ಉತ್ತರ ೨.೪೨ ಮೀಟರ್ ಅಗಲವು ಎಡಭಾಗವಾಗಿದೆ ಹಾಗೂ ತಳಭಾಗ ೧.೪೬ ಮೀಟರ್ ಅಳತೆಯನ್ನು ಹೊಂದಿದೆ. ಬಲಭಾಗದ ಶಿಲ್ಪವು ೩.೦೭ ಮೀಟರ್ ಉದ್ದ ೨.೪೨ ಮೀಟರ್ ಅಗಲ ತಳಭಾಗವು ೦.೭೫ ಮೀಟರ್ ಅಳತೆಯನ್ನು ಹೊಂದಿದೆ. ಅದೇ ರೀತಿಯಾಗಿ ಇವೆರಡು ಶಿಲ್ಪಗಳ ನಡುವಿನ ಅಂತರ ೫.೭೫ ಮೀಟರ್ ಇದೆ.

ವಿಶೇಷವಾಗಿ ಕುಮತಿ ಮತ್ತು ಹುಲಿಕುಂಟೆಯ ಮಾನವಾಕೃತಿಗಳ ಸ್ಪಷ್ಟವಾಗಿ ಮಾನಾವಾಕೃತಿಗಳಂತೆ ಗೋಚರಿಸುವುದುರ ಜೊತೆಗೆ ವಿಶಿಷ್ಟ ಲಕ್ಷಣಗಳನ್ನೊಳಗೊಂಡಿರುವುದರಿಂದ ಇವುಗಳ ಅಪರೂಪವೆನಿಸಿವೆ.

**ಜುಮ್ಮೋಬನಹಳ್ಳಿ**

ಕೂಡ್ಲಿಗಿಯಿಂದ ಸುಮಾರು ಇಪ್ಪತರಡು ಕಿ.ಮೀ ಹಾಗೂ ಕಾನಾಹೊಸಹಳ್ಳಿ ಕೇಂದ್ರದಿಂದ ಆರು ಕಿ.ಮೀ ದೂರವಿರುವ ಜುಮ್ಮೋಬನಹಳ್ಳಿ ಗ್ರಾಮದ ಬಳಿ ದೊಡ್ಡಮರಡಿ, ಸುಣ್ಣಮರಡಿ ಎಂಬು ಗುಡ್ಡಗಳಿವೆ. ಇಲ್ಲಿ ಕೆರೆಯ ಸಮೀಪ ದೊಡ್ಡ ಮರಡಿಯಿದ್ದು ಇದು ಈ ಗ್ರಾಮದ ಎತ್ತರ ಪ್ರದೇಶವಾಗಿದೆ. ಊರಿನ ನಾಲ್ಕು ದಿಕ್ಕಿನಲ್ಲೂ ಅರಣ್ಯವಿದೆ. ಗಿಡ್ಡನಹಟ್ಟಿ, ಓಬಯ್ಯನಗುಡ್ಡ, ಕಾರೆಕೊಳ್ಳ, ಬೆತ್ತಯ್ಯನಹಟ್ಟಿ, ದೋಂಬರಹಳ್ಳಿಗಳು ನಾಶವಾದಾಗ ಅಲ್ಲಿ ಇರುವಂತಹ ಜನರು ಜುಮ್ಮೋಬನಹಳ್ಳಿಗೆ ಬಂದು ನೆಲೆಸಿದ್ದಾರೆಂದು ಊರಿನ ಹಿರಿಯರು ಹೇಳುತ್ತಾರೆ.

ಕಾಶಿಕೊಳ್ಳ, ಹಳ್ಳದ ಬಳಿ ಆದಿ ಇತಿಹಾಸಕಾಲದ ಕುರುಹುಗಳು ದೊರೆತಿವೆ. ಜುಮ್ಮೋಬನಹಳ್ಳಿ ಗ್ರಾಮದ ವಾಯುವ್ಯ ಭಾಗದಲ್ಲಿನ ಪಿಕಾಪಹಳ್ಳದ ಬಳಿಯ ದಂಡೆಯ ಮೇಲಿನ ಜಮೀನು ಒಂದರಲ್ಲಿ ಆದಿ ಹಳೆಶಿಲಾಯುಗ ಕಾಲಕ್ಕೆ ಸೇರಿದ ಶಿಲಾಕೊಡಲಿಯೊಂದು ದೊರೆತಿದ್ದು ಮಹತ್ವದನಿಸಿದೆ. ಇದನ್ನು ನೀಸ ಜಾತಿಯ ಶಿಲೆಯಿಂದ ಆಶ್ಯೂಲ್ ಮಾದರಿಯಲ್ಲಿ ತಯಾರಿಸಲಾಗಿದೆ. ಈ ಕೊಡಲಿಯ ಹಿಂಭಾಗ ಮತ್ತು ಮುಂಭಾಗದಲ್ಲೂ ಚೆಕ್ಕೆಗಳನ್ನು ಎಬ್ಬಸಲಾಗಿದ್ದು ಆಯುಧದ ಎರಡು ಬದಿಯಲ್ಲಿ ಬಾಯಿಭಾಗವು ಹರಿತವಾಗಿರುವಂತೆ ತಯಾರಿಸಲಾಗಿದೆ. ಇದರ ಉದ್ದ ೧೨ ಸೆಂ.ಮೀ ಅಗಲ ೨.ಸೆಂ.ಮೀ ಇದ್ದು ಬಾಯಿಯ ಭಾಗ ೫ ಸೆಂ. ಮೀ ಇದೆ.[೩೦]

ಇದೇ ಹಳ್ಳದ ಮತ್ತೊಂದು ದಂಡೆಯ ಬದಿಯಲ್ಲಿ ಸೂಕ್ಷ್ಮ ಶಿಲಾಯುಗ ಕಾಲಾಕ್ಕೆ ಸೇರಿದ ಕೋರನ್ನ ಕೆಲ ಚೂರುಗಳು ದೊರತಿವೆ. ಇಲ್ಲಿ ದೊರತ ಕೊಡಲಿಯಲ್ಲಿ ಆದಿ ಹಳೆಯಶಿಲಾಯುಗ

ಕಾಲದ ಮಾನವ ತನ್ನ ದಿನಿತ್ಯದ ಕೆಲಸಗಳಿಗಾಗಿ ಉಪಯೋಗಿಸಿ ಕೊಂಡಿದ್ದಾನೆಂದು ಆಯುಧದ ಮೇಲಿನ ಕೆಲವು ಗುರುತುಗಳ ಸಹಾಯದಿಂದ ನಿರ್ಧರಿಸಬಹುದಾಗಿದೆ. ಈ ಆಯುಧವನ್ನು ಕರ್ನಾಟಕದ ಪುರಾತತ್ವ ಶಾಸ್ತ್ರಜ್ಞರಾದ ಪ್ರೋ.ಅ ಸುಂದರವರು ಪರಿಶೀಲಿಸಿ ಕರ್ನಾಟಕದಲ್ಲಿ ನೀಸಶಿಲೆಯ ಪ್ರಥಮ ಶೋಧನೆ ಎಂದು ಹೇಳಿದ್ದಾರೆ.

ಈ ಗ್ರಾಮದಲ್ಲಿ ಪ್ರತಿವರ್ಷ ಮಲಿಯಮ್ಮ ಮಾತಾಂಗಿ ಜಾತ್ರೆ ನಡೆಯುತ್ತದೆ. ಈ ಜಾತ್ರೆಯಲ್ಲಿ ಪ್ರಾಗೈತಿಹಾಸಿಕ ಮಾನವನನ್ನು ನೆನೆಪಿಸಿಕೊಡುವಂತಹ ಗಾವು ಎನ್ನುವ ಜನಪದೀಯ ಆಚರಣೆ ಹಿಂದಿನಿಂದಲೂ ರೂಢಿಯಲ್ಲಿದೆ. ಪೋತರಾಜನೊಬ್ಬ ಜೀವಂತವಿರುವ ಹೋತವನ್ನು ತನ್ನ ಹಲ್ಲಿನಿಂದ ಕಚ್ಚಿ....ಕಚ್ಚಿ.... ಜೀವ ತಗೆಯುತ್ತಾನೆ. ನಂತರ ನಿಂತಲ್ಲೇ ರಕ್ತವನ್ನು ಹೀರಿ ಹಸಿಮಾಂಸವನ್ನು ತಿನ್ನುತ್ತಾನೆ. ಮೂಲತ ಮನುಷ್ಯ ಹಸಿಮಾಂಸವನ್ನು ಪ್ರಾಗೈತಿಹಾಸಿಕ ಕಾಲದಲ್ಲಿ ತಿಂದು ಜೀವಿಸುತ್ತಿದ್ದ ಎನ್ನುವುದನ್ನು ಈ ಜನಾಂಗಿಕ ಆಚರಣೆಯಿಂದ ಗ್ರಹಿಸಿಬಹುದಾಗಿದೆ. ಈ ಹಿನ್ನಲೆಯಲ್ಲಿ ಈ ಗ್ರಾಮದ ಸುತ್ತ ಮುತ್ತಲಿನ ಪ್ರದೇಶದಲ್ಲಿ ಖಂಡಿತಾ ಆದಿಮಾನವ ನೆಲೆಸಿರಬೇಕು.

**ಚಿಕ್ಕಮಲ್ಲಹೊಳೆ**

ಕಾನಾಹೊಸಹಳ್ಳಿ ಹೋಬಳಿಯ ವ್ಯಾಪ್ತಿಯಲ್ಲಿ ಬರುವ ತೊರೆ ಕಲ್ಲಹಳ್ಳಿ ಸಮೀಪದಲ್ಲಿರುವ ಚಿಕ್ಕಮಲ್ಲನಹೊಳೆ ನವಶಿಲಾಯುಗದ ನಿವೇಶನವಾಗಿದೆ. ವಸತಿದಿಬ್ಬ ಅಥವಾ ಬೂದಿದಿಬ್ಬ ಇದನ್ನು ಅಲ್ಲಿ ಸ್ಥಳೀಯರು ಮುತ್ತಿಗಾರರ ಬೊಟ್ಟು, ದೇವರತ್ತಿನ ಬೊಟ್ಟು ಎಂದು ಕರೆಯುವರು. ಕಾಟಿಯ್ಯನವರ ನಿಜಲಿಂಗಪ್ಪನ ಹೊಲದಲ್ಲಿದೆ. ಸುಮಾರು ನಾಲ್ಕು ಎಕರೆ ವಿಸ್ತೀರ್ಣ ಹೊಂದಿದ್ದು ನಾಲ್ಕು ಅಡಿ ಎತ್ತರ ೯೫ ಅಡಿ ಉದ್ದ ೧೦೫ ಅಡಿ ಉತ್ತರ ದಕ್ಷಿಣವಾಗಿ ಅಗಲವನ್ನು ಹೊಂದಿದೆ, ಇಲ್ಲಿ ಸುಮಾರು ಐದು ಸ್ತರಗಳಲ್ಲಿ ಬೂದು ಮಿಶ್ರಿತ ಮಣ್ಣು ಮತ್ತು ಹೆಚ್ಚಾಗಿ ಸಗಣಿ ಕಂಡು ಬರುತ್ತದೆ. ಉಳಿದ ೩.೪ ಸ್ತರದಲ್ಲಿ ಪಶುಗಳ ಮೂಳೆಗಳು ಹೇರಳವಾಗಿ ದೊರಕಿವೆ. ಕೆಂಪು ಮತ್ತು ಬೂದು ಬಣ್ಣದ ಮಡಿಕೆ ಚೂರುಗಳ ಕಲ್ಲಿನ ಕೊಡಲಿ ಮೊನಚಾದ ಕಲ್ಲುಗಳಲ್ಲದೆ ಇಲ್ಲಿ ಇನ್ನಿತರ ಶಿಲಾಯುಧಗಳನ್ನು ನೋಡಬಹುದು.

ಸ್ಥಳೀಯರು ಈ ಬೂದಿದಿಬ್ಬದ ಮಣ್ಣನ್ನು ಮನೆಗಳ ಮೇಲೆ ಹಾಕಲು ಮತ್ತು ಫಲವತ್ತತೆಗಾಗಿ ಹೊಲಗಳಿಗೆ ಎತ್ತಿನ ಗಾಡಿಗಳ ಮೂಲಕ ಏರಿಕೊಂಡು ಹೋಗುತ್ತಿದ್ದುದರಿಂದ

ಸುಲಭವಾಗಿ ಮೇಲಿನಿಂದ ತಳಭಾಗದವರಗೆ ಸ್ತರಗಳನ್ನು ಗುರುತಿಸಲು ಅವಶೇಷಗಳನ್ನು ಪತ್ತೆ ಹಚ್ಚಲು ಸಹಾಯಕವಾಗಿದೆ.

ಯಾತ್ರಿಕರು ರೊಪ್ಪದಬಟ್ಟು, ಮುತ್ತಿಗಾರ, ದೇವರತ್ತುಗಳು ಐಕ್ಯಗೊಂಡು ಸ್ಥಳವೆಂದು ಹಣಿಗಿಟ್ಟುಕೊಳ್ಳುವುದರ ಕೊತೆಗೆ ಗರ್ಭಿಣಿ ಸ್ತ್ರೀಯರು ಬಾಯಿಚಪಲಕ್ಕಾಗಿ ಚೂರ್ಣದಂತೆ ತಿನ್ನುವರು, ಮುತ್ತಿಗಾರರ ಎತ್ತುಗಳೇ ಆರಾಧ್ಯ ದೈವಶಕ್ತಿ. ಇಲ್ಲಿ ಮೂಳೆಗಳು ಸಾಕಟ್ಟು ಪ್ರಮಾಣದಲ್ಲಿ ದೊರೆತ್ತಿರುವುದರಿಂದ ಇದು ಸ್ಮಶಾನ ನೀವೇಶನವೆಂದು ಕರೆಯುವುದು ಚರ್ಚಾ ವಿಷಯ. ಈ ಬೂದುದಿಬ್ಬಗಳಿಗೆ ನೂತನ ಶಿಲಾಯುಗದ ಪಶುಸಂಗೋಪನೆಯೇ ಕಾರಣವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಇದು ವಾದಕ್ಕೆ ಹೊರತಾಗಿಲ್ಲ ಬೇಟಿಯಿಂದ ಅಲ್ಪವಾಗಿ ಒಂದು ಬುಟಕಟ್ಟು ವರ್ಗ ಸ್ಥಿತ್ಯಂತರಗೊಂಡ ಈ ರೀತಿ ನದಿ ಮುಖಜ ಭೂಮಿಯಿಂದ ಅಭಿಮುಖವಾಗಿ ಅಂದರೆ ಆಂಧ್ರ ಪ್ರದೇಶದಿಂದ ವಲಸೆ ಬಂದರೆಂಬ ವಿಷಯ ತಿಳಿಯುತ್ತದೆ.

ಮಳೆ ಭೂಸಮುದ್ರ ಬೇಚಾರಕ ಗ್ರಾಮವಾಗಿದೆ, ಕಲ್ಲಹಳ್ಳಿ ಮತ್ತು ಚಿಕ್ಕ ಮಲ್ಲನಹೊಳೆ ಮಧ್ಯ ಈ ನದಿ ದಂಡೆಯ ಮೇಲೆ ಪ್ರಾಚೀನ ಕಾಲದ ಮಳೆ ಭೂಸಮುದ್ರ ಎಂಬ ಗ್ರಾಮ ಇಂದು ನಶಿಸಿಹೋಗಿದೆ, ಈ ಮಳೆ ಭೂಸಮುದ್ರದಲ್ಲಿ ಈ ಹಿಂದೆ ನಾಯಕ ಸಮುದಾಯದ ಗುಂಡೇತಲಾರು ಬೆಡಗಿನವರು ನೆಲೆಸಿದ್ದು ಕ್ರಮೇಣ ಇಲ್ಲಿಂದ ಬೇರೆ ಕಡೆ ವಲಸೆ ಹೋದರು ಉಜ್ಜಯಿನಿ ಮಠ ಮತ್ತು ಆ ಗ್ರಾಮಕ್ಕೆ ಸಂಬಂಧಿದಂತೆ ಈ ಮಳೆ ಭೂಸಮುದ್ರ ತೀರ ಹತ್ತಿರವಾಗಿದೆ.

**ಓಬಳಾಪುರ**

ಕೂಡ್ಲಿಗಿ ತಾಲೂಕಿನಿಂದ ಸುಮಾರು ೪೦ ಕಿ.ಮೀ ದೂರದಲ್ಲಿರುವ ಓಬಳಾಪುರವು ಪ್ರಾಚೀನ ನೆಲೆಯಾಗಿದೆ. ಈ ನೆಲೆಯಲ್ಲಿ ನೈಸರ್ಗಿಕ ಗವಿಯೊಂದಿದ್ದು ಇಲ್ಲಿ ಆದಿ ಮಾನವ ನೆಲೆಸಿದಂತಹ ಕುರುಹುಗಳು ದೊರೆತಿದ್ದು ಬೃಹತ್ತಾದ ಬಂಡೆಯ ಅಡಿಯಲ್ಲಿ ಗವಿಯನ್ನು ನಿರ್ಮಿಸಲಾಗಿದೆ. ಈ ನೆಲೆಯು ಹುರುಳಿಹಾಳ್ ಗ್ರಾಮಕ್ಕೆ ಹೋಗುವ ಹಾದಿಯಲ್ಲಿ ಕಂಡುಬರುತ್ತದೆ. ಸಣ್ಣ ಪುಟ್ಟ ಗಿಡ ಮರಗಳನ್ನು ಕಲ್ಲು ಬಂಡೆಗಳನ್ನು ಹೊಂದಿರುವ ಈ ಪ್ರದೇಶದಲ್ಲಿ ಪುರಾತನ ಕುಲುಮೆಗಳು(ಕಬ್ಬಣದ) ದೊರೆತಿವೆ. ಕಬ್ಬಣದ ಕಿಟ್ಟ ಹಾಗೂ ಮಣ್ಣಿನಿಂದ ತಯಾರಿಸಿದ ಮೂಸೆಗಳು ದೊರೆತಿವೆ. ಇದರಿಂದ ಈ ಪ್ರದೇಶದಲ್ಲಿ ಕಬ್ಬಿಣ ತಯಾರಿಸುವ

ಘಟಕವನ್ನು ಸ್ಥಾಪಿಸಲಾಗಿತ್ತು ಎಂಬುವುದನ್ನು ಅರಿಯಬಹುದು. ಬಹುಶ ಕಬ್ಬಿಣದ ಅದಿರು ನೆರೆಯ ತಾಲೂಕು ಸಂಡೂರಿನಲ್ಲಿ ದೊರೆಯುತ್ತಿದ್ದರಿಂದ ಮತ್ತು ಕಬ್ಬಣ ತಯಾರಿಸಲು ಉತ್ತಮವಾದ ಅವಕಾಶಗಳು ಈ ನೆಲೆಯಲ್ಲಿರುವುದರಿಂದ ಈ ತರಹದ ಕುಲುಮೆಗಳು ಕಂಡುಬಂದಿವೆ ಎಂದು ಊಹಿಸಬಹುದಾಗಿದೆ.

**೨.೪ ರಾಜಕೀಯ ಇತಿಹಾಸ**

ಈ ಪ್ರದೇಶವು ಮೌರ್ಯ, ಶಾತವಾಹನ, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ಜರಿಮಲೆಯ ಪಾಳೆಯಗಾರರು, ಗುಡೇಕೋಟೆ ಪಾಳೆಯಗಾರರು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಪ್ರಾಚೀನ ಭಾರತದಲ್ಲಿ ದಖ್ಖನ ಪ್ರಸ್ಥಭೂಮಿ ಭಾಗವನ್ನು ಕುಂತಲದೇಶ ಎಂದು ಕರೆಯುತ್ತಿದ್ದ ಕ್ರಿ.ಪೂ ೪ನೇ ಶತಮಾನದಲ್ಲಿ ಆಳಿದ ನಂದರು ಕುಂತಲ ದೇಶಕ್ಕೂ ಒಡೆಯರಾಗಿದ್ದರು. ಮೌರ್ಯರ ಆಳ್ವಿಕೆಯ ಕಾಲದಲ್ಲಿ ದಕ್ಷಿಣ ಭಾರತನ್ನೊಳಗೊಂಡಂತೆ ಈ ಪ್ರದೇಶ ಅದರ ಅಧೀನದಲ್ಲಿತ್ತು.[೩೧]

ಕಾನಾಹೊಸಹಳ್ಳಿ ಹೋಬಳಿಯ ಪರಿಸರದಲ್ಲಿ ಹಿಂದುಳಿದ ವರ್ಗಗಳ ಅಧಿಕವಾಗಿರುವುದನ್ನು ಕಾಣುತ್ತೇವೆ. ಶಿಷ್ಟ ಸಂಸ್ಕೃತಿಯೊಡನೆ ಪರಿಶಿಷ್ಟ ಸಂಸ್ಕೃತಿಯು ಎದ್ದು ಕಾಣುವಂತೆ ಬೆರತುಕೊಂಡಿದೆ. ಇಲ್ಲಿ ಜನರು ಹಿಂದುಳಿದವರಾದರೂ ಅವರ ಆದರ್ಶ ಮೌಲ್ಯಗಳು ಕುಂದುವಂತಹದ್ದಲ್ಲ ಇಲ್ಲಿ ಒಂದು ಊರಿನ ಅಥವಾ ತಾಲೂಕಿನ ಹಾಗೂ ಹೋಬಳಿಯ ಇತಿಹಾಸವೆಂದರೆ ಕೇವಲ ಅದೊಂದಕ್ಕೆ ಸೀಮಿತವಾಗಿರುವುದಿಲ್ಲ ತನ್ನ ಸುತ್ತ-ಮುತ್ತಲಿನ ಊರುಗಳ ಮತ್ತು ತಾಲೂಕುಗಳ ಹಾಗೆಯೇ ಅದಕ್ಕೆ ಸಂಬಂಧಪಟ್ಟ ಜಿಲ್ಲೆಯ ಹಾಗೂ ನೆರೆಹೊರೆಯ ಜಿಲ್ಲೆಗಳ ಇತಿಹಾಸಗಳೊಡನೆ ಸಂಬಂಧ ಹೊಂದಿರುವುದು ಸಹಜ ಆಧುನಿಕ ಯುಗದಲ್ಲಿ ಈ ಸಂಬಂಧದ ಎಲ್ಲೇಗಳ ರಾಷ್ಟ-ಅಂತರಾಷ್ಟ್ರಗಳ ಮಟ್ಟದವರಗೂ ವ್ಯಾಪಿಸಿಕೊಂಡಿರುತ್ತವೆ. ಹೀಗೆ ನಮ್ಮ ಹೋಬಳಿ ಚರಿತ್ರೆಯನ್ನು ಅವಲೋಕಿಸುವಾಗ ನಮ್ಮ ತಾಲೂಕು, ಜಿಲ್ಲೆ ನಾಡು ದೇಶಗಳ ಭೂಪಟಗಳ ಹಿನ್ನಲೆಯಲ್ಲಿಯೇ ಗುರುತಿಸಬೇಕಾಗುತ್ತದೆ.

ಪ್ರಮುಖವಾಗಿ ನಾವೀಗ ಕಾನಾಹೊಸಹಳ್ಳಿ ಹೋಬಳಿ ಎಂದು ಮೇರೆಗಳಲ್ಲಿ ಗುರುತಿಸುವ ಭೂಭಾಗವು ಪ್ರಾಚೀನ ಕಾಲದಿಂದಲೂ ಒಂದೇ ರೀತಿಯಾಗಿ ಇದ್ದಿಲ್ಲ ಕಾಲಕಾಲಕ್ಕೆ ತಕ್ಕಂತೆ ಬೇರೆ ಬೇರೆ ರಾಜಕೀಯ ತಿಕ್ಕಾಟಗಳಿಗೆ ಒಳಪಟ್ಟ ಬೇರೆ ಬೇರೆ ರೂಪಗಳನ್ನು ತಿಳಿಯುತ್ತಾ ಬಂದಿದೆ. ವಿವಿಧ ಸಾಮ್ರಾಜ್ಯಗಳು ಅರಸರು ಆಳ್ವಿಕೆಗೆ ಒಳಪಡುತ್ತಾ ಬಂದಿದೆ.

**ಮೌರ್ಯರು**

ಬಳ್ಳಾರಿ ಜಿಲ್ಲೆಯಲ್ಲಿ ಇತಿಹಾಸ ಪೂರ್ವಕಾಲದ ಅವಶೇಷಗಳು ತೆಕ್ಕಲಕೋಟೆ, ಕುಮತಿ, ಸಂಗನಕಲ್ಲು, ಹಂಪಿ ಮುಂತಾದಕಡೆಗಳಲ್ಲಿ ಕಂಡುಬಂದಿದ್ದರೂ ಇತಿಹಾಸ ಕಾಲದ ಶಾಸನಗಳು ದೊರೆತಿದ್ದುದು ಮೌರ್ಯರ ಕಾಲದಿಂದೀಚಗೆ ಎನ್ನಬಹುದು. ಮೌರ್ಯರ ಚಕ್ರವರ್ತಿ ಅಶೋಕನು ಕ್ರಿ.ಪೂ ಸುಮಾರು ೨೭೨-೨೩೨ ರವರೆಗೆ ಆಳಿಕೆ ಮಾಡುವಾಗ ಇವನ ಶಾಸನಗಳು ನೆರೆಯ ಸೀಮೆಗಳಾದ ಕೊಪ್ಪಳದ ಗವಿಮಠ, ಮಸ್ಕಿ, ನಿಟ್ಟೂರು ಮತ್ತು ಉದಯಗೊಳ ಅಶೋಕ ಸಿದ್ದಾಪುರ, ಜಟ್ಟಿಂಗರಾಮೇಶ್ವರ, ಬ್ರಹ್ಮಗಿರಿಯಲ್ಲಿ ದೊರೆಕಿವೆ.

ಬ್ರಹ್ಮಗಿರಿ ಶಾಸನದ ಉಲ್ಲೇಖದಂತೆ ಇದು ಇಸಿಲ ಸಾಮ್ರಾಜ್ಯದ ದಕ್ಷಿಣ ಗಡಿಯಾಗಿದ್ದು ಇಸಿಲವನ್ನು ಆಡಳಿತದ ಕೇಂದ್ರವಾನ್ನಾಗಿ ಮಾಡಿಕೊಂಡು ಮಹಾಮಾತ್ರರನ್ನು ಅಲ್ಲಿ ನೇಮಿಸಿದ್ದಿರಬಹುದು.[೩೨] ಹಾಗೇ ಮೌರ್ಯ ಸಾಮ್ರಾಟ ಅಶೋಕನ ಆಳ್ವಿಕೆ ಕಾಲದ ಕ್ರಿ.ಪೂ ೨೫೮ರ ಶಾಸನ ಕೂಡ್ಲಿಗಿ ತಾಲೂಕಿನಲ್ಲಿ ದೊರೆಕಿರುವುದು ಮತ್ತಷ್ಟು ಪುಷ್ಟೀಕರಿಸಿದೆ[೩೩] ಅಶೋಕನ ಪ್ರತಿನಿಧಿಯಾದ ಮಹಾಮಾತ್ರನು ಈ ಪ್ರಾಂತ್ಯವನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ.

**ಶಾತವಾಹನರು**

ಮೌರ್ಯರ ನಂತರ ಆಡಳಿತಕ್ಕೆ ಬಂದ ಶಾತವಾಹನರು ಕ್ರಿ.ಪೂ ೨೨೦ ರಿಂದ ೨೩೦ ರವರೆಗೆ ಸುಮಾರು ನಾಲ್ಕುನೂರು ವರ್ಷ ಕುಂತಲದೇಶವನ್ನು ಶಾತವಾಹನರು ಆಳಿದರು ಮ್ಯಾಕದೇಣಿ(ಆದೋನಿ) ಹಿರೇಹಡಗಲಿಗಳಲ್ಲಿ(ಬಳ್ಳಾರಿ) ಆಳ್ವಿಕೆಗೆ ಸಂಬಂಧಿಸಿದಂತೆ ಎರಡು ಶಾಸನ ದೊರೆತಿವೆ. ಇವುಗಳಲ್ಲಿ "ಶಾತವಾಹನಾರಠ" "ಶಾತವಾನಿಹಾರ" ಎಂಬ ಉಲ್ಲೇಖಗಳಿವೆ. ದೇವಗಿರಿ ಚೋರನೂರು. ಅಗ್ರಹಾರ, ಕೂಡ್ಲಿಗಿ, ಕುಡತಿನಿ, ಕುರುಗೋಡು, ಎಮ್ಮಿಗನೂರು, ಕಂಪ್ಲಿ, ಬಳ್ಳಾರಿ, ಸಿದ್ಧಾಪುರ, ಬ್ರಹ್ಮಗಿರಿ, ಕೋಗಳಿ ಮುಂತಾದ ಗ್ರಾಮಗಲ್ಲಿ ಶಾತವಾಹನರ ಕಾಲದ ಅವಶೇಷಗಳು ಕಂಡು ಬರುತ್ತವೆ.[೩೪]

ಈ ಅಂಶಗಳನ್ನು ಗಮನಿಸಿದಾಗ ಕೂಡ್ಲಿಗಿ ತಾಲೂಕು ಮತ್ತು ಹೋಬಳಿಯ ಊರುಗಳಾದ ಕೊಟ್ಟೂರು, ಹೆಡ್ಗಾಳ, ಶಿವಪುರ, ಕಾನಾಹೊಸಹಳ್ಳಿ, ಹಾಳು ದೇವಲಾಪುರ ಅಲ್ಲದೇ ಈ ಹಿಂದೆ ಕೂಡ್ಲಿಗಿ ತಾಲೂಕಿಗೆ ಸೇರದ್ದ ಚೋರನೂರು ಅಗ್ರಹಾರ ಈಗ ಸಂಡೂರು ತಾಲೂಕು ಕೋಗಳಿ ಗ್ರಾಮಗಳ ಹಿಂದೆ ಶಾತವಾಹನರ ಆಳ್ವಿಕೆಗೆ ಒಳಪಟ್ಟರಬಹುದಾದ ಮಾಹಿತಿ

ಸಾಧ್ಯತೆಯನ್ನು ವ್ಯಕ್ತಪಡಿಸುತ್ತವೆ. ಈ ಗ್ರಾಮಗಳ ಆಯಾ ಕಾಲಾಕ್ಕೆ ಆಯಾ ಅರಸ ಕಾಲಾದಲ್ಲಿ ಕೆಲವು ಗುರ್ತಿಸಿಕೊಂಡರೆ ಮತ್ತೆ ಕೆಲವು ನಿರ್ಲಕ್ಷ್ಯಕ್ಕೆ ಒಳಗಾಗಿ ಅಭಿವೃದ್ಧಿ ಕಾಣದೆ ಕುಗ್ರಾಮಗಳಾಗಿ ಇದ್ದಿರಬಹುದು, ಅವುಗಳ ಗುರುತಿಸಲು ಶತಮಾನಗಳ ಕಳೆದಿರಬಹುದು. ಈ ಗ್ರಾಮಗಳ ಶಾತವಾಹನರ ಆಡಳಿತವನ್ನು ಅನುಭವಿಸಿರುವುದು ಮೇಲಿನಂಶದಿಂದ ತಿಳಿದುಬರುತ್ತದೆ.

**ಕದಂಬರು**

ಕ್ರಿಶ ೪-೫ ನೇ ಶತಮಾನದಲ್ಲಿ ಪ್ರಸಿದ್ಧರಾಗಿ ಬನವಾಸಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದರು ಇವರು ಶಾತವಾಹನ ರಾಷ್ಟ್ರದ ಸೇಂದ್ರಕ ವಿಷಯವನ್ನು (ಬಳ್ಳಾರಿ ಜಿಲ್ಲೆಯ ದಕ್ಷಿಣ ಪಶ್ಚಿಮ ಭಾಗ ಇರಬೇಕು) ಗೆದ್ದು ಉಚ್ಚಂಗಿ ದುರ್ಗವನ್ನು ತಮ್ಮ ರಾಜ್ಯದ ಪೂರ್ವ ಭಾಗದ ರಾಜಧಾನಿಯನ್ನಾಗಿ ಮಾಡಿಕೊಂಡರು ಇವರು ೧೦-೧೧ ನೇ ಶತಮಾನಗಳವರೆಗೂ ಕದಂಬರ ಒಂದು ಮನೆತನ ಕೊಟ್ಟೂರು ಕೋಗಳಿ ನಾಡನ್ನು ಆಳುತ್ತಾ ಬಂದಿತ್ತೆಂಬುವುದುದಕ್ಕೆ ಶಾಸನಗಳು ಸಿಕ್ಕಿವೆ. ಸಂಡೂರಿನ ಸ್ವಾಮಿಮಲೆಯ ಕಾರ್ತಿಕೇಯನ ಉಲ್ಲೇಖವು ಮಯೂರವರ್ಮ ಚಂದ್ರವಳ್ಳಿ ಶಾಸನಗಳಲ್ಲಿ ಕಂಡು ಬರುತ್ತದೆ.[೩೫]

**ಬಾದಾಮಿ ಚಲುಕ್ಯರು**

ಇವರು ಕ್ರಿಶ ೬ನೇ ಶತಮಾನದಲ್ಲಿ ರಾಜ್ಯ ಸ್ಥಾಪಿಸಿದರು ಚಲುಕ್ಯದೊರೆ ಒಂದನೇ ಕೀರ್ತಿವರ್ಮನು ಕೊಂಕಣದ ಮೌರ್ಯರನ್ನು ಸೋಲಿಸಿ ಆಳ್ವಿಕೆ ನಡೆಸಿದ ನಂತರ ಇಮ್ಮಡಿ ಪುಲಿಕೇಶಿಯ ಶಾಸನ ಕುರುಗೋಡಿನಲ್ಲಿ ದೊರಕಿದೆ. ಈತನ ಮಕ್ಕಳಾದ ಆದಿತ್ಯವರ್ಮ ಮತ್ತು ಚಂದ್ರಾದಿತ್ಯರು ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಯ ಭಾಗಗಳನ್ನು ಆಳುತ್ತಿದ್ದರು. ಕುರುಗೋಡಿನ ಶಾಸನವೊಂದು ಸತ್ಯಾಶ್ರಯನನ್ನು ಹೆಸರಿಸುತ್ತದೆ. ಕರ್ನಾಟಕದ ದೇವಾಲಯಗಳ ಹಲವು ಬಗೆಯ ಪ್ರಾಯೋಗಗಳು ಇವರ ಕಾಲದಲ್ಲಿ ನಡೆದವು. ಕುಮಾರಸ್ವಾಮಿ ಬೆಟ್ಟದ ಪಾರ್ವತಿ ದೇವಾಲಯಗಳು ಇಲ್ಲಿ ಕಂಡು ಬರುವ ಇವರ ಕಾಲದ ಕುರುಹುಗಳಾಗಿವೆ. ಶಿಲ್ಪಗಳ ಆಧಾರದ ಮೇಲೆ ಈ ಭಾಗದಲ್ಲಿ ಬಾದಾಮಿ ಚಲಕ್ಯರು ಆಳ್ವಿಕೆ ಇತ್ತೆಂಬುದು ದೃಢವಾಗುತ್ತದೆ.

**ರಾಷ್ಟ್ರಕೂಟರು**

ತಮ್ಮ ಪರಾಕ್ರಮದಿಂದ ದಕ್ಷಿಣ ಭಾರತವನ್ನೆಲ್ಲ ತೋಳ್‌ಬಲದಿಂದ ಗೆದ್ದು ತಲಾಕಾಡಿನ ಗಂಗರನ್ನು ತಮ್ಮ ಸಾಮಾಂತರನ್ನಾಗಿ ಮಾಡಿಕೊಂಡು ಬಳ್ಳಾರಿ, ಚಿತ್ರದುರ್ಗ, ಅನಂತಪುರ, ತುಮಕೂರು ಮುಂತಾದ ಪ್ರದೇಶಗಳನ್ನಾಳಿದರು. ಆಗ ಈ ಪ್ರಾಂತ್ಯಗಳು "ನೊಳಂಬವಾಡಿ"

ಎಂದು ಕರೆಸಿಕೊಳ್ಳುತ್ತದ್ದು. ಕಾನಾಹೊಸಹಳ್ಳಿ ಹೋಬಳಿಯು ನೊಳಂಬವಾಡಿಯ ಭಾಗವಾಗಿತ್ತು. ಈಗಿನ ಹರಪನಹಳ್ಳಿ ಕೂಡ್ಲಿಗಿಯ ಪಶ್ಚಿಮ ಭಾಗಗಳು[೩೬] ಹಡಗಲಿ ತಾಲೂಕಿನ ಕೆಲವು ಪ್ರದೇಶಗಳು ಹಗರಿಬೊಮ್ಮನಹಳ್ಳಿಯ ಕೋಗಳಿ, ಹನಸಿ, ಕೂಡ್ಲಿಗಿ ತಾಲೂಕಿನ ಮೊರಬ, ನೊಳಂಬವಾಡಿಯ ಕೋಗಳಿ ೩೦೦ ಕ್ಕೆ ಒಳಪಟ್ಟದ್ದು. ಚಲುಕ್ಯರು ಕೋಗಳಿನಾಡನ್ನು ಆಳುತ್ತಿದ್ದರು. ರಾಷ್ಟ್ರಕೂಟರ ಹನ್ನೊಂದು ಶಾಸನಗಳು ಈ ಜಿಲ್ಲೆಯಲ್ಲಿ ದೊರೆತಿವೆ. ಬಾಗಳಿ, ಕುಡತಿನಿ, ಕಡಬಗೆರೆ, ಬೆರಸ್ತಹಳ್ಳಿ ಮತ್ತು ಕೊಳಗಲ್ಲು ಗ್ರಾಮಗಳಲ್ಲಿ ದೊರತಿವೆ.

**ಹೊಯ್ಸಳರು**

ದ್ವಾರ ಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ ಹೊಯ್ಸಳರು ಕ್ರಿ.ಶ ೧೧೦೮ ರಿಂದ ೧೩೧೧ ರವರಗೆ ಬಳ್ಳಾರಿ ಜಿಲ್ಲೆಯೂ ಸೇರಿದಂತೆ ದಕ್ಷಿಣ ಭಾಗವೆಲ್ಲ ಹೊಯ್ಸಳ ಸಾಮ್ರಾಜ್ಯದ ಭಾಗವಾಗಿತ್ತು. ವಿಷ್ಣುವರ್ಧನ ಬಳ್ಳಾರಿ, ರಾಯಚೂರು ಗೆದ್ದು ಉಚ್ಚಂಗಿ ಪಾಂಡ್ಯರು ಹೊಯ್ಸಳರ ಸಾಮಂತರಾದ್ದರು ಎಂದು ಕ್ರಿ.ಶ ೧೧೮೯ ರ ಶಾಸನ ಪ್ರಕಾರ ತಿಳಿಯುತ್ತದೆ. ನಂತರ ಕ್ರಿ.ಶ. ೧೨೨೧ ರ ಕೊಟ್ಟೂರು ಶಾಸನದಲ್ಲಿ ವೀರನರಸಿಂಹನ ಉಲ್ಲೇಖ ಬರುತ್ತದೆ. ಕಾಲಾಂತರದಲ್ಲಿ ಸೇವುಣರ ಸಿಂಘಣ ಮತ್ತು ಮಗ ಕೃಷ್ಣರ ವಂಶದಲ್ಲಿ ಕೋಗಳಿ ನಾಡು ದಾವಣಗೆರೆ ಭಾಗಗಳಿದ್ದವು.[೩೭]

**ಕಲ್ಯಾಣ ಚಾಲುಕ್ಯರು**

ಇಮ್ಮಡಿ ತೈಲಪನು ರಾಷ್ಟ್ರಕೂಟರ ಆಡಳಿತವನ್ನು ಕೊನೆಗಾಣಿಸಿ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಚಾಲುಕ್ಯರು ಸಾಮ್ರಾಜ್ಯವನ್ನು ಪುನರಾರಂಭಿಸುತ್ತಾನೆ. ಇವರಿಗೆ ಸಂಬಂಧಿಸಿದ ಬಹಳಷ್ಟು ಶಾಸನಗಳು ಈ ಜಿಲ್ಲೆಯಲ್ಲಿ ದೊರೆತಿವೆ ಹಾಗೂ ಕಾನಾಹೊಸಹಳ್ಳಿ ಹೋಬಳಿಯಲ್ಲಿ ಅತಿ ಹೆಚ್ಚಾಗಿ ಕಲ್ಯಾಣ ಚಾಲುಕ್ಯರು ದೇವಾಲಯಗಳನ್ನು ಕಾಣಬಹುದು.

**ಕುಮ್ಮಟ ದುರ್ಗದ ಅರಸರು**

೧೩೧೧ರಲ್ಲಿ ಮಲ್ಲಿಕಾಫ್‌ರನ ದಾಳಿಯಿಂದ ಹೊಯ್ಸಳರು ಅವನತಿ ಕಡೆ ಸಾಗಿ[೩೮] ಕಂಪಿಲಿರಾಯ ಮತ್ತು ಕುಮಾರರಾಮನಿಂದ ಅರಂಭವಾದ ಇತಿಹಾಸ ಮುಂದೆ ಪಾಳೆಗಾರನ ಹುಟ್ಟಿಗೂ ಕಾರಣವಾಯಿತು. ಹರಿಹರ ಬುಕ್ಕರು ಕಂಪಿಲಿರಾಯನ ಆಶ್ರಯ ಬಯಸಿ ೧೩೩೬ರಲ್ಲಿ ವಿಜಯನಗರ ಸ್ಥಾಪನೆಗೆ ಕಾರಣರಾದರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಪೂರ್ವದಲ್ಲಿ

ಕಂಪಿಲಿರಾಯನು ಕ್ರಿ.ಶ ೧೩೨೦ರಲ್ಲಿ ಸ್ವಾತಂತ್ರನಾದ ಸೇವಣರ ಸಾಮಂತ ಅರಸನಾಗಿದ್ದ ಕಂಪಿಲಿರಾಯ ಕಾಲ ನಂತರ ಸ್ವತಂತ್ರನಾಗಿ ಕುಮ್ಮಟ ದುರ್ಗವನ್ನು(ಕಂಪಿಲಿ) ರಾಜಧಾನಿ ಮಾಡಿಕೊಂಡಿದ್ದ, ನಂತರ ಬಂದ ಕುಮಾರರಾಮ ಜರಿಮೆಲೆ ಮತ್ತು ಗುಡೇಕೋಟೆ ಅರಸರೊಂದಿಗೆ ರಾಜಕೀಯ ಒಡನಾಟ ಇಟ್ಟುಕೊಂಡಿರುವುದು ಚರಿತ್ರೆ ಪುಟಗಳಿಂದ ಗೊತ್ತಾಗುತ್ತದೆ. ಗುಡೇಕೋಟೆ ಮತ್ತು ಜರಿಮಲೆ ನಾಯಕರು ಕೂಡ್ಲಿಗಿ ಮತ್ತು ಕಾನಾಹೊಸಹಳ್ಳಿ ಹೋಬಳಿ ಪ್ರದೇಶಗಳನ್ನು ತನ್ನ ಆಳ್ವಿಕೆ ಒಳಪಡಿಸಿಕೊಂಡಿರುವುದು ಇತಿಹಾಸ ಆಧಾರಗಳಿಂದ ಗುರುತಿಸಬಹುದು.

## ವಿಜಯನಗರದ ಅರಸರು

ಕ್ರಿ.ಶ ೧೩೩೬ರಲ್ಲಿ ಸ್ಥಾಪನೆಗೊಂಡ ವಿಜಯನಗರ ಸಾಮ್ರಾಜ್ಯ ಕರ್ನಾಟಕ ಇತಿಹಾಸ ಪುಟಗಳಲ್ಲಿ ಒಂದು ಪ್ರಮುಖವಾದಂತಹ ಘಟ್ಟ ಮಲ್ಲಿಕಾಫರ್‌ನ ಧಾಳಿಗಳಿಂದ ತತ್ತರಿಸಿದ ದಕ್ಷಿಣ ಭಾರತ ಅಸಂಘಟಿತ ಸ್ಥಿತಿಯಲ್ಲಿತ್ತು. ಅವನ ಧಾಳಿಗಳನ್ನು ತಡೆಗಟ್ಟುವಷ್ಟು ಸಾಮರ್ಥ ಅರಸರ ಕೊರತೆ ಎದ್ದು ಕಾಣುತ್ತಿತ್ತು. ಅಂತಹ ಸಂದರ್ಭದಲ್ಲಿ ಮಹಾಸಾಮ್ರಾಜ್ಯವೇ ಆಗಿದೆ. ನಾಲ್ಕು ಪ್ರಮುಖ ವಂಶಗಳ ಆಳ್ವಿಕೆ ಕಂಡು ಇವರ ಅಧೀನದಲ್ಲಿ ಅನೇಕ ರಾಜ ಮಹಾರಾಜರು ಸಾಮಂತರು ಇವರ ತೋಳಬಲಕ್ಕೆ ಶರಣಾಗಿ ರಾಜ್ಯಭಾರ ಮಾಡಿದರು.

ವಿಜಯನಗರ ಅರಸರು ಸುಮಾರು ೨೦೦ ವರ್ಷ ಕಾಲ ಸಾಮ್ರಾಜ್ಯ ಮೆರೆಸಿದ ಕಾಲವದು. ಈ ಅವಧಿಯಲ್ಲಿ ಕಾನಾಹೊಸಹಳ್ಳಿ ಹೋಬಳಿಯ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳ ಸೇರಿದಂತೆ ಬಳ್ಳಾರಿ ಜಿಲ್ಲೆ ಎಲ್ಲಾ ಪ್ರದೇಶಗಳಲ್ಲದೆ ನೆರೆಹೊರೆಯ ರಾಜ್ಯಗಳು ಇವರು ಆಡಳಿತಕ್ಕೆ ಒಳಪಟ್ಟಿದ್ದವು ವಿಜಯನಗರದ ಅರಸರ ಶಾಸನಗಳ ಕೂಡ್ಲಿಗಿ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಮೊರಬ, ದೇವಲಾಪುರ, ಚಿಕ್ಕಕೆರ್ನ್ನಾಳ್ಳಿ ಗ್ರಾಮಗಳಲ್ಲಿ ಕಂಡು ಬರುತ್ತವೆ.

ಗುಡೇಕೋಟೆ ಮತ್ತ ಜರಿಮಲೆ ಇವರ ಕಾಲದ ಪಾಳೆಯ ಪಟ್ಟುಗಳಾಗಿ ಗುರ್ತಿಸಿಕೊಂಡಿದ್ದವು. ವಿಜಯನಗರ ಅರಸರು ಇವರಿಗೆ ಕೆಲವು ಪ್ರದೇಶಗಳನ್ನು ಬಿಟ್ಟುಕೊಟ್ಟು ಅವರಿಂದ ಸೈನ್ಯದ ನೆರವುವನ್ನು ಪಡೆಯಲಾಗುತ್ತಿತ್ತು. ವಿಜಯನಗರ ಕಾಲದಲ್ಲಿ ಕೂಡ್ಲಿಗಿ ಮತ್ತು ಕಾನಾಹೊಸಹಳ್ಳಿ ಸುತ್ತಮುತ್ತಲಿನ ಪ್ರದೇಶಗಳು ಸೈನಿಕರನ್ನು ಯುದ್ಧ ಸಾಮಗ್ರಿ ಆಹಾರಧಾನ್ಯ ಈ ಪ್ರದೇಶಗಳಿಂದ ಪೊರೈಸಲಾಗುತ್ತಿತ್ತು. ಎಂಬುದು ಸ್ಥಳಿಯ ಮಾಹಿತಿಗಳಿಂದ ತಿಳಿದುಬರುತ್ತದೆ. ಯುದ್ಧ ಸಾಮಗ್ರಿಗಳಾದ ಖಡ್ಗ, ಗುರಾಣಿ, ಈಟಿ, ಚಾಕು, ಕತ್ತಿ ಮುಂತಾದವು ಈ ಪ್ರದೇಶದ

ಊದು ಕುಲುಮೆಗಳಿಂದ ತಯಾರಿಸಲಾಗುತ್ತಿದ್ದವು. ಕೂಡ್ಲಿಗಿ ತಾಲೂಕಿನಲ್ಲಿ ಬೇಡ ಬುಡಟ್ಟಿನ ಜನರು ಹೆಚ್ಚಾಗಿರುವುದರಿಂದ ದೈಹಿಕವಾಗಿ ಬಲಿಷ್ಠರು ಎದೆಗಾರಿಕೆಯ ವೀರರಾಗಿದ್ದರಿಂದ ಅರಸರು ಈ ಭಾಗದ ಜನರನ್ನು ತಮ್ಮ ಯುದ್ಧಗಳಲ್ಲಿ ಬಳಸಿಕೊಳ್ಳುತ್ತಿದ್ದರು. ಅಂತವುಗಳಲ್ಲಿ ವೀರುಪಾಪುರ, ಜರಿಮಲೆ, ಗುಡೇಕೋಟೆ, ಹೊಸಹಳ್ಳಿ ಪರಿಸರದ ಗ್ರಾಮವಾಸಿಗಳು ಸೇರಿದ್ದರು ಎನ್ನಲಾಗುತ್ತದೆ.

ಆದ್ದರಿಂದ ಕೂಡ್ಲಿಗಿ ತಾಲೂಕಿನ ಪಾಳೆಗಾರರು ವಿಜಯನಗರಕ್ಕೆ ನಿಷ್ಠೆಯಿಂದ ನಡೆದುಕೊಂಡರು ಕ್ರಿ. ಶ ೧೫೬೫ರ ರಕ್ಕಸತಂಗಡಿ ಯುದ್ಧ ತರುವಾಯ ಅನಾಥವಾದ ವಿಜಯನಗರ ತನ್ನ ಗತವೈಭವ ಮರುಕಳಿಸಲಾಗಲಿಲ್ಲ ಹಾಗಾಗಿ ಪಾಳೆಯಗಾರರೆಲ್ಲ ಸ್ವತಂತ್ರರಾದರು. ಇವರಲ್ಲಿ ನಾಯಕ ಜನಾಂಗ ಪಾಳೆಗಾರರು ಸಂಡೂರಿನವರು ಮರಾಠಿ ಮೂಲದವರು ನಮ್ಮ ಜಿಲ್ಲೆ ಹಾಗೂ ರಾಯದುರ್ಗ, ಚಿತ್ರದುರ್ಗ, ಪಾಳೆಯಗಾರರಲ್ಲಿ ವೈವಾಹಿಕ ಸಂಬಂಧಗಳು ಬೆಸೆದುಕೊಂಡಿವೆ. ಹಲವಾರು ಸಾರಿ ಪರಸ್ಪರ ದ್ವೇಷಿ ಹೋರಾಟಗಳು ನಡೆಯತ್ತಿದ್ದವು, ಯಾರು ಸ್ವತಂತ್ರ ರಾಜ್ಯ ಸ್ಥಾಪನೆ ವಿಸ್ತಾರ ಮಾಡುವಷ್ಟು ಸಮರ್ಥರಾಗಲಿಲ್ಲ ದೊಡ್ಡ ರಾಜರ ವಿರುದ್ಧ ಹೊರಾಡಿದರು. ಅದು ತಾತ್ಕಾಲಿಕವಾಗಿರುತ್ತಿತ್ತು. ಉದಾಹರಣೆ ಬಳ್ಳಾರಿಯ ಕೋಟೆಯನ್ನು ಶಿವಾಜಿ ಮುತ್ತಿದಾಗ ಪಾಳೆಯಗಾರರ ವಿಧವೆ ಪತ್ನಿ ೨೭ ದಿನಗಳವರಗೆ ಸೋಲದೆ ಹೋರಾಡಿದಳು.

ಪೇಶ್ವ ಬಾಜೀರಾವ್ ಸಂಡೂರನ್ನು ಮತ್ತಿಗೆ ಹಾಕಿದಾಗ ಗೆಲ್ಲಲಾಗುಲಿಲ್ಲ ಕೂಡ್ಲಿಗಿಯಿಂದ ಸಮೀಪರುವ ವೀರನದುರ್ಗವನ್ನು ಒಮ್ಮೆ ಟಿಪ್ಪು ಮುತ್ತಿಗೆ ಹಾಕಿ ವಶಪಡಿಸಿಕೊಳ್ಳಲಾರದೆ ಸೋತುಹೋದ ಈ ಜಿಲ್ಲೆಯ ಪಾಳೆಗಾರರಲ್ಲಿ ಪ್ರಬಲರಾಗಿದ್ದರೆಂದರೆ ಹರಪನಹಳ್ಳಿಯವರು ಅವರಲ್ಲಿ ಸೋಮಶೇಖರನಾಯಕ್ ಅತಿ ಪ್ರಸಿದ್ಧ ದೊರೆ ಇವನು ಆರಾಧ್ಯ ದೈವ ಮೊರಬದ ಶ್ರೀ ವೀರಭದ್ರೇಶ್ವರ ಇತನ ಮನೆಯ ದೈವವಾಗಿತ್ತು.

**ಅಮರನಾಯಕರ ಪದ್ಧತಿ**

ವಿಜಯನಗರ ಕಾಲದ ಅರಸರು ಕೆಲವೊಂದು ದೂರದ ಪ್ರದೇಶಕ್ಕೆ ಹೋಗಿ ಆಡಳಿತ ನಡೆಸಲಾಗುವುದಿಲ್ಲ ಹಾಗಾಗಿ ಆಡಳಿತ ಸುಲಭವಾಗಲೆಂದು ಸಣ್ಣ ಪುಟ್ಟ ಪ್ರದೇಶಗಳಲ್ಲಿ ಸಾಮಂತರನ್ನು ನೇಮಿಸಿದರು. ಕೂಡ್ಲಿಗಿ ಹಾಗೂ ಕಾನಾಹೊಸಹಳ್ಳಿ ಪರಿಸರದ ಕೆಲವೊಂದು ಪ್ರದೇಶಗಳು ಈ ಪದ್ಧತಿಗೆ ಒಳಗಾಗಿವೆ, ವಿಜಯನಗರ ಕಾಲದಲ್ಲಿ ಕೆಲವೂಂದು ಭೂಪ್ರದೇಶಕ್ಕೆ

ಉಂಬಳಿ ಕೊಡಬೇಕಾಗುತ್ತದೆ. ಇದಕ್ಕೆ ಅಮರಂ ಎಂದು ಕರೆಯುತ್ತಾರೆ. ಈ ಪ್ರದೇಶಕ್ಕೆ ಒಬ್ಬ ಅಮರನಾಯಕ ಎಂದು ನೇಮಿಸುತ್ತಿದ್ದರು. ಇವನ ಕಾರ್ಯ ತೆರಿಗೆ ಸಂಗ್ರಹಿಸುವುದು ಸೈನ್ಯವ್ಯವಸ್ಥೆ ರಾಜನ ಆದೇಶಪಾಲನೆ ಸಮಾಜದ ಶಾಂತಿ ಸುವ್ಯವಸ್ಥೆ ಕಾಪಾಡುವುದಾಗಿತ್ತು.

**ಗುಡೇಕೋಟೆ ಪಾಳೆಯಗಾರರು**

ಗುಡೇಕೋಟೆ ಪಾಳೆಯಗಾರರು ಕ್ರಿ ಶ ೧೪೨೮(೧೫೦೬)ನೆ ಪ್ರಭವನಾಮ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶಿಯಂದು ರಾಜ್ಯ ಸ್ಥಾಪನೆಯ ವಿಷಯ ತಿಳಿಯುತ್ತದೆ. ಕ್ರಿ ಶ ೧೫೦೬ರ ಸುಮಾರಿಗೆ ಗುಡೇಕೋಟೆ ಸಂಸ್ಥಾನದ ಗಂಡಳನಾಯಕರ ನೇತೃತ್ವದಲ್ಲಿ ಸ್ಥಾಪನೆಯಾಯಿತಂತೆ, ಇವನು ಕುಮಾರರಾಮನ ಸ್ನೇಹಿತನಾದ ಗಡಿಯಾಂಕ ಭೀಮನ ವಂಶದವನು ಹೀಗಿದ್ದರೂ ಗಡಿವಂತ ಭೀಮ ಗಂಡಳನಾಯಕ ಮತ್ತು ಹಿರೇಭೋಮ್ಮಂತ ನಾಯಕರೇ ಮೂಲ ಪುರುಷರು ಎನ್ನಬಹುದು.

ಗಂಡಳನಾಯಕ ಕ್ರಿಶ ೧೫೮೯-೧೫೨೧ ಅಂದರೆ ೧೫ ವರ್ಷ ಆಳ್ವಿಕೆ ಮಾಡಿದ ನಂತರ ಪೆನ್ನಪ್ಪನಾಯಕ ೧೫೨೧-೧೫೪೧ ಪಾಳೆನಾಯಕ ೧೫೪೧-೧೫೫೮ ಕೆಮ್ಮಯ್ಯರಾಜ ೧೫೫೮-೧೯೦೨ ರಾಮಪ್ಪನಾಯಕ ೧೯೦೨-೧೯೩೪ ಆಳ್ವಿಕೆ ಮಾಡಿದ ಉಲ್ಲೇಖವಿದೆ. ಪ್ರಮುಖವಾಗಿ ಬೊಮ್ಮಂತರಾಜನ ಹೆಸರು ಗುಡೆಕೋಟೆಯ ಚರಿತ್ರೆಯ ಪ್ರಾತಃ ಸ್ಮರಣೀಯ ರಾಮಪ್ಪನಾಯಕನ ಹಿರಿಮಗನ ಬೋಮ್ಮಂತರಾಜ ೧೬೩೭-೧೬೭೬ ಇವನ ಗುಡೇಕೋಟೆ, ಸಂಡೂರು, ಪೊಗದಿಕೊಟ್ಟ ಆಂದ್ರಭಾಗದ ಹಳ್ಳಿಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡಿದ್ದನು.[೪೦] ಅದರಲ್ಲಿ ರಾಯದುರ್ಗವು ಸೇರಿತು, ಮೊಳಕಾಲ್ಮೂರು, ಚಳ್ಳಕೆರೆ, ಜಗಳೂರು, ಕೂಡ್ಲಿಗಿ, ಕಾನಾಹೊಸಹಳ್ಳಿಯ ಪ್ರದೇಶಗಳು ಇವನ ವ್ಯಾಪ್ತಿಗೆ ಸೇರಿದವು. ಈ ಅಂಶ ಗಮನಿಸಿದರೆ ಯಾವುದೇ ಒಂದು ಗ್ರಾಮ, ಊರು ಒಬ್ಬ ಅರಸನ ವ್ಯಾಪ್ತಿಗೆ ಓಳಪಡಬೇಕಾದರೆ ಆ ಊರುಗಳು ಹಿಂದಿನಿಂದ ಬೆಳೆದು ಬಂದಿರಬೇಕಾಗುತ್ತದೆ. ಶತಮಾನಗಳಷ್ಟು ಇತಿಹಾಸ ಹೊಂದಿರುತ್ತವೆ. ಕಾನಾಹೊಸಹಳ್ಳಿ ಹೋಬಳಿ ಗ್ರಾಮಗಳು ಕುಮಾರರಾಮನ ಕಾಲದಲ್ಲಿ ಬೆಳವಣಿಗೆ ಹೊಂದಿ ವಿಜಯನಗರದ ವೇಳೆಗೆ ಚೇತರಿಸಿಕೊಂಡು ಪಾಳೆಗಾರರ ಕಾಲಕ್ಕೆ ಗುರುತಿಸಿಕೊಂಡಂತೆ ಕಂಡು ಬರುತ್ತವೆ.

**ಜರಿಮಲೆ ಪಾಳೆಯಗಾರರು**

ಕಾನಾಹೊಸಹಳ್ಳಿ ಕೇಂದ್ರದಿಂದ ಸುಮಾರು ೩೦ ಕಿ.ಮೀ ದೂರದಲ್ಲಿರುವ ಈ ಜರಿಮಲೆ ತಾಲೂಕ ಕೇಂದ್ರಸ್ಥಾನವಾದ ಕೂಡ್ಲಿಗಿಯೊಂದಿಗೆ ಚಾರಿತ್ರಿಕ ಸಂಬಂಧ ಹೊಂದಿರುವ ಅಂಶಗಳ ಈವರೆಗೆ ದೊರತಿರುವ ಅಂಶಗಳಿಂದ ತಿಳಿದುಬರುತ್ತದೆ. ಜರಿಮಲೆ ನಾಯಕ ಪಾಳೆಯಗಾರರ ಮೂಲ ಕೆದಕುವುದಾದರೆ ಜರಿಮಲೆ ಮೂಲಪುರುಷ ಆಂದ್ರದ ಕಂಚಿ ಕೇಂದ್ರಯಿಂದ ಬಂದವರೆಂದು ಹೇಳಲಾಗುತ್ತದೆ. ಇನ್ನೊಂದು ಮೂಲದ ಪ್ರಕಾರ ಕುಮಾರರಾಮನ ವಂಶಜರೆಂದು ತಿಳಿಯುತ್ತದೆ. ಎಂ.ಎಂ. ಕಲ್ಬುರ್ಗಿಯವರ ಕರ್ನಾಟಕದ ಕೈಫಿಯತ್ತಿನಲ್ಲಿ ಕಣಕುಪ್ಪ, ಕೋಟೆಕಟ್ಟಿ, ಚಿಕ್ಕಣ್ಣನಾಯಕಪಟ್ಟ ಮಾಡಿಕೊಂಡು ನಂತರ ಚಿತ್ರದುರ್ಗಕ್ಕೆ ಹೋಗುವಾಗ ದಾರಿ ಮಧ್ಯಗುಡ್ಡದಲ್ಲಿ ಗಿಡಮರಗಳು ಬಹಳ ಜರಿಮಲೆ ಬೇಡರು ಈ ಗುಡ್ಡದಲ್ಲಿದ್ದ ೨೦ ಜನ ಕಳ್ಳರು ಸೇರಿಕೊಂಡು ಬಹು ಉಪದ್ರವ ಮಾಡುತ್ತ ಇದ್ದಲ್ಲಿ ಕುಮಾರಪ್ಪ ಅವರ ಮುನ್ನೂರು ನಾನ್ನೂರು ಜನ ತಗೆದುಕೊಂಡು ಹೋಗಿ ಈ ಗುಡ್ಡದಲ್ಲಿ ಇದ್ದಂತಹ ಕಳ್ಳರನ್ನು ಕೆಲವರು ಸಿಕ್ಕದವರನ್ನು ಹೊಡೆದು ಹಾಕಿದರು, ಕೆಲವರು ಓಡಿಹೋದರು ಅಲ್ಲಿ ಗುಡ್ಡಕ್ಕೆ ಕೋಟೆ ಕಟ್ಟಿದಾಗ ಗುಡೆಕೋಟೆಯೆಂದು ಹೇಳಲಾಗಿದೆ.[೪೧]

ಗುಡೆಕೋಟೆ ಪಾಳೆಗಾರರಿಗಿಂತ ಪೂರ್ವದಲ್ಲಿಯೇ ಜರಿಮಲೆ ಸ್ಥಾಪನೆಯಾದಂತಿದೆ, ವಿಜಯನಗರದ ಅರಸರು ಕ್ರಿಶ ೧೫೭೪ರ ಸುಮಾರಿಗೆ ತಮ್ಮ ಅಧೀನದಲ್ಲಿದ್ದ ತಳವಾರ, ಪೌಜುದಾರ ಮೊದಲಾದವರಿಗೆ ಆಯಾ ಸ್ಥಳಗಳಲ್ಲಿ ನಡಸುತ್ತಿದ್ದ ಅಧಿಕಾರವನ್ನು ಅವರಿಗೆ ಬಿಟ್ಟುಕೊಟ್ಟರು ಅದರಂತೆಯೇ ಭೋಮ್ಮಂತರಾಜ ಕುಮಾರರಾಮನ ವಂಶಕ್ಕೆ ಸೇರಿರಬಹುದು ಎನ್ನಲಾಗಿದೆ. ಹಿಂದೆ ಮಾಡಿಕೊಂಡು ಬಂದಿದ್ದ ನಾಡತಳವಾರಿಕೆಯನ್ನು ಕಾವಲಿಯನ್ನು ದಯಪಾಲಿಸಬೇಕೆಂದು ಕೇಳಿಕೊಂಡಾಗ ಉಂಟು ಸ್ಥಳಗಳನ್ನು ಬಿಟ್ಟುಕೊಟ್ಟರು.ಅವನಿಗೆ ಏಳು ಮಕ್ಕಳಾದರು ಮಲ್ಲಿಕಾರ್ಜುನನಾಯಕ ಜರಿಮಲೆ ಆಳುತ್ತಿದ್ದ ಇವನ ಕಾಲದಲ್ಲಿ ಬದಲಾವಣೆಗಳಾದವು.

ಜರಿಮಲೆ ಸಂಸ್ಥಾನದ ಮೂಲ ಪುರುಷ ಪಾಪಣ್ಣ ನಾಯಕ ವಿಜಯನಗರದ ಸಾಳ್ವ ವೀರನರಸಿಂಹ ೧೪೯೧–೧೫೦೫ ಸೇವಕನಾಗಿದ್ದನಂತೆ, ತನ್ನ ಸೇವೆ ನಿಷ್ಠೆಯಿಂದ ಅರಸನಿಗೆ ಒಪ್ಪಿತನಾಗಿದ್ದ ಈತ ಕಾಂಚಿಪುರಂಗೆ ಹೋದಾಗ ಆತನೊಡನಿದ್ದು ವಿಶ್ವಾಸಕ್ಕೆ ಪಾತ್ರನಾದ. ವಿಜಯನಗರದಲ್ಲಿ ನಡೆಯುತ್ತಿದ್ದ ಗಲಭೆ ಸಂಘರ್ಷಗಳನ್ನು ಅಡಗಿಸಲು ಈತ ಸಿದ್ಧನಾದನು ಪಾಪಣ್ಣನಿಗೆ ವಟ್ಟು, ದರೋಜಿಗಳ ಅರಸನಿಂದ ಬಳುವಳಿಯಾಗಿ ಬಂದವು. ಮೆಕೆಂಜಿಯ

ದಾಖಲೆಗಳಲ್ಲಿ ಪಾಪಣ್ಣನಾಯಕನೆಂದು ಇತರೆ ಆಕರಗಳಲ್ಲಿ ಪೆನ್ನಪ್ಪನಾಯಕನೆಂದು ಇವರ ಮೂಲವಂಶಿಕರನ್ನು ಹೆಸರಿಸಲಾಗಿದೆ.

ಪಾಪಣ್ಣನಾಯಕ ಪೆನ್ನಪ್ಪನಾಯಕನ ತಂದೆಯಾಗಿರಬೇಕು, ಇವರು ಆಂಧ್ರದ ಕದ್ರಿಯಿಂದ ವಲಸೆ ಬಂದವರು ಎಂಬುದನ್ನು ಉಲ್ಲೇಖಿಸಲಾಗಿದೆ. ಆರಂಭದಲ್ಲಿ ಹೊಸ ಸ್ಥಳದಲ್ಲಿನ ಜೀವನ ಕಷ್ಟವಾದ್ದರಿಂದ ಎರಡನೆ ತಲೆಮಾರಿನವರು ಆಳ್ವಿಕೆಗೆ ಮುಂದಾಗಿರಬೇಕು.[೪೨] ಪೆನ್ನಪ್ಪನಾಯಕ ತನ್ನ ತಂದೆಗೆ ಬಳುವಳಿಯಾಗಿ ಬಂದಿದ್ದ ಗ್ರಾಮಗಳಿಗೆ ಒಡೆಯನಾಗುತ್ತಾನೆ. ಇದಕ್ಕೆ ವಿಜಯನಗರದ ಅರಸ ಅಚ್ಚುತದೇವರಾಯ ೧೫೨೯-೧೫೪೨ ನಿಂದ ಜಹಗೀರ್ ಸಹ ಲಭಿಸಿತ್ತು. ಈ ಐತಿಹಾಸಿಕ ಸ್ಥಳದಲ್ಲಿ ಪೆನ್ನಪ್ಪನಾಯಕ ಕೋಟೆ ನಿರ್ಮಿಸಿ ಆಳುತ್ತಾನೆ. ಸಂಡೂರು ಪ್ರದೇಶವು ಇವನಿಗೆ ಸೇರಿತ್ತು ಸಿದ್ದೋಜಿ ಗೋರ್ಪೇಡೆಯ ನಂತರ ಸಂಡೂರು ಪ್ರದೇಶ ಜರಿಮಲೆಗೆ ಕೈತಪ್ಪಿತ್ತು. ವೀರನರಸಿಂಹನು ೧೫೦೫-೧೫೦೯ ಗುಡೆಕೋಟೆ, ಮಲೆಭೂಪ ಸಮುದ್ರ ಗ್ರಾಮಗಳನ್ನು ಇವನಿಗೆ ಬಿಟ್ಟು ಕೊಡುತ್ತಾನೆ.

ಅಚ್ಯುತರಾಯ ಜರಿಮಲೆ ಪೆನ್ನಪ್ಪನಿಗೆ ೫೦೦ ಅಶ್ವದಳ ೩೦೦ ಕಾಲ್ದಳ ಪಡೆ ಇಟ್ಟುಕೊಳ್ಳಲು ಅನುಮತಿ ನೀಡಿದ ೩೫,೧೫೦ ಮಹಮ್ಮದ ಶಾಹಿ ಪಗೋಡ ಆದಾಯ ಇರುವ ಮತ್ತೆರಡು ಹೆಚ್ಚಿಗೆ ಮಾಗಾಣಿಗಳನ್ನು ನೀಡಿದ್ದಾನೆಂದು ಮನ್ರೋ ವರದಿಗಳಿಂದ ತಿಳಿದುಬರುತ್ತದೆ. ಕೃಷ್ಣದೇವರಾಯನ ನಂತರ ರಾಜಕೀಯದಲ್ಲಿ ಅನೇಕ ಪಲ್ಲಟಗಳಾದವು, ಅಚ್ಚುತರಾಯ ತನ್ನ ಸಂಸ್ಥಾನಗಳ ಮೇಲೆ ಮಹಮ್ಮದಯಿಯರ ಆಕ್ರಮಣವನ್ನು ತಡೆಯಲು ಯೋಜನೆಗಳನ್ನು ಕೈಗೊಂಡನು, ಅದರಂತೆ ಕನಕಗಿರಿ, ರಾಯದುರ್ಗ, ಸಿರಾ, ಬಸವಪಟ್ಟಣ, ಉಜ್ಜೆನಿ ಮೊದಲಾದ ಕೇಂದ್ರಗಳ ನಾಯಕರಿಗೆ ಬಿಗಿಭದ್ರತೆಯಿಂದ ಇರುವಂತೆ ಆದೇಶಿಸಿದ, ಇದರಂತೆ ಬಳ್ಳಾರಿ, ಗುತ್ತಿ, ಬಸವಪಟ್ಟಣ, ಪಾವಗಡ, ಕಣಕುಪ್ಪೆ, ಕುಂದರ್ಷಿ ನಾರಾಯಣದೇವರಕೆರೆ, ಡಣಾಯನಕನಕೆರೆ, ಸಂಡೂರು, ಕುಡತಿನಿ, ಪಾಳೆಗಾರರಿಗೆ ಸಜ್ಜಾಗಾಲು ತಿಳಿಸಿದ. ಸುಲ್ತಾನರ ಓಳಸಂಚು ದಾಳಿ ತಪ್ಪಿಸಲು ನಾಯಕರ ಸಹಾಯಕ್ಕೆ ಮುಂದಾದ ಪೆನ್ನಪ್ಪನಾಯಕನು ಕಣಕುಪ್ಪ, ಕೂಡ್ಲಿಗಿ ನಾರಾಯಣದೇವರಕೆರೆ, ಡಣಾಯಕನಕೆರೆ, ಸಂಡೂರು ಪ್ರದೇಶಗಳನ್ನು ತನ್ನ ವಶದಲ್ಲಿಟ್ಟುಕೊಳ್ಳುತ್ತಾನೆ.

ಪೆನ್ನಪ್ಪ ಉಜ್ಜನಿಯಲ್ಲಿರುವಾಗ ಬಸವಂತರಾಜ, ಭೂಮಿರಾಜ, ಬೂದಿಸಿದ್ದರಾಜ ಎಂಬ ಮೂರು ಜನ ಮಕ್ಕಳು ತಂದೆಯ ಆಜ್ಞೆಯಿಂದ ರಾಜ್ಯಪರಿಪಾಲಿಸುತ್ತಿದ್ದರು. ಭೂಮಿರಾಜ ಅಪ್ರತಿಮ ಶಕ್ತಿಶಾಲಿ ಸಾಹಸದೊರೆ, ವಿಜಯಪುರದ ಬಾದಷಾಹನ ಕುದುರೆ ಮೇಲೆ ಸವಾರಿಮಾಡಿ

ಪಳಗಿಸಿ "ಜಮ್ಮುದಾದ ಗುಡ್ಡಯ್ಯ ಜರಿಮಲೆ" ಎಂಬ ಬಿರುದು ಪಡೆದು ವಾಪಸ್ಸಾದ ಜೊತೆಗೆ ನಾಲ್ಕು ಮಾಗಾಣಿಗಳು ರೂ ೨೦೦೦ ಕಾಣಿಕೆ ೨೦೦ ಕಾಲಾಳು, ೩೦೦ ಅಶ್ವದಳಗಳನ್ನು ಇಟ್ಟುಕೊಳ್ಳಲು ಅನುಮತಿಸಿದ್ದ. ಸುಲ್ತಾನ ಭೂಮಿರಾಜ ಸುಲ್ತಾನನ ಸ್ನೇಹಕ್ಕೆ ಮೆಚ್ಚುಗೆಯಿಂದಲೇ ಆಳುತ್ತಿದ್ದ ಆ ಕಾಲದಲ್ಲಿ ಯುದ್ಧ, ಸಂಘರ್ಷಗಳು ಹೊಂದಾಣಿಕೆಗಳು ಆಗಿ ಸುಲ್ತಾನನ ವಿರೋಧಿಯಾಗಿ ಜರಿಮಲೆಯಲ್ಲಿ ಇಮ್ಮಡಿನಾಯಕ ಅಧಿಕಾರಕ್ಕೆ ಬಂದಾಗ ಸುಲ್ತಾನ ಉಜ್ಜಿನಿಗೆ ಮುತ್ತಿಗೆ ಹಾಕಿದ ಜರಿಮಲೆ ನಾಯಕನನ್ನು ಶಿಕ್ಷಿಸಿದ ಮರಳಿ ಉಜ್ಜನಿ ಪಡೆಯಲು ಇಮ್ಮಡಿನಾಯಕನ ಹತ್ತಿರ ಧನವಿರಲಿಲ್ಲ. ಇದೇ ಸಂದರ್ಭದಲ್ಲಿ ಹರಪನಹಳ್ಳಿ ನಾಯಕರು ವಿಜಯಪುರದ ಸುಲ್ತಾನರಿಗೆ ೨೦೦ ಪಗೋಡಕೊಟ್ಟು ಉಜ್ಜನಿಯನ್ನು ಪಡೆದುಕೊಂಡರು.

ಹೀಗೆ ನಾಯಕ ಕೂಡ್ಲಿಗಿ ಬರುತ್ತಿರುವಾಗ ಚಿತ್ರದುರ್ಗದವರು ಕಣಕುಪ್ಪಯನ್ನು ಆಕ್ರಮಿಸಿಕೊಂಡರು ಕೊನೆಗೆ ದುರ್ಗದವರೊಂದಿಗೆ ಸ್ನೇಹಗಳಿಸಿದ ಇಮ್ಮಡಿ ನಾಯಕ ಕೂಡ್ಲಿಗಿಯಿಂದ ಭೂಪಸಮುದ್ರಕ್ಕೆ ರಾಜಧಾನಿಯನ್ನು ವರ್ಗಾಯಿಸಿದ ಆಗ ಹರಪ್ಪನಹಳ್ಳಿ ನಾಯಕರು ಕೂಡ್ಲಿಗಿಯನ್ನು ಪಡೆದುಕೊಂಡು ವೀರನದುರ್ಗ ಸೇರಿ ತನ್ನ ರಾಜ್ಯಕ್ಕೆ ಸೇರಿಕೊಂಡರು.[೪೩]

ಅಲ್ಲದೆ ಹಿಂದೆ ಕಾನಾಹೊಸಹಳ್ಳಿ ಉಪಗ್ರಾಮವಾಗಿದ್ದಂತಹ ದೊಂಬರಹಳ್ಳಿಯಲ್ಲಿ ದೊರತಿರು ಶಾಸನದಲ್ಲಿ ವಿಮಿಡಿನಾಯಕನ ಯಲೆ ಮಂಚುವಿನ ಗುರಮ್ಮನಿಗೆ ಒಂದು ಗ್ರಾಮವನ್ನು ದಾನ ನೀಡಿದ್ದನೆಂದು ಉಲ್ಲೇಖಗೊಂಡಿದೆ.[೪೪] ಈ ಶಾಸನದ ಮೂಲಕ ವಿಮಿಡಿ-ನಾಯಕ(ಇಮ್ಮಡಿನಾಯಕ) ಜರಿಮಲೆ ಸಂಸ್ಥಾನದ ಪಾಳೆಗಾರನಾಗಿದ್ದು ತಿಳಿದುಬರುತ್ತದೆ. ಆದ್ದರಿಂದ ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಕಾನಾಹೊಸಹಳ್ಳಿ ಪರಿಸರವು ಸಹ ಈ ಪಾಳೆಯಗಾರರ ಪ್ರಭಾವಕ್ಕೆ ಒಳಗಾಗಿದ್ದು ಕಂಡುಬರುತ್ತದೆ.

## ಕೊನೆಟಿಪ್ಪಣಿಗಳು

೧. ಕಾನಾಹೊಸಹಳ್ಳಿ ನಾಡಕಛೇರಿ ಮಾಹಿತಿ

೨. ಕಾನಾಹೊಸಹಳ್ಳಿ ನಾಡಕಛೇರಿ ಮಾಹಿತಿ

೩. ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ಜಿಲ್ಲಾ ಪಂಚಾಯಿತಿ ಕೂಡ್ಲಿಗಿ.

೪. ಶ್ರೀನಿವಾಸ ಎಲ್, ಹಂಪಿ ಪರಿಸರದ ಆದಿ ಮಾನವನ ನೆಲೆಗಳು, ಪು- ೫೩

೫. ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ಜಿಲ್ಲಾ ಪಂಚಾಯಿತಿ ಕೂಡ್ಲಿಗಿ.

೬. ರಘುಪತಿ ಕೆಮ್ಮೂರು : ಸ್ಥಳನಾಮಾಧ್ಯಯನ ಇತ್ತೀಚಿನ ಒಲವುಗಳ ಒಂದು ಚಿತ್ರ, ಹರತಿಸಿರಿ, ಪು-೪೦೮

೭. ವಾಸುದೇವ ಬಡಿಗೇರ(ಸಂ), ಹಾನಗಲ್ಲು ಸ್ಥಳಿಯ ಚರಿತ್ರೆ ಪುರಾತತ್ವ ಮಾಲೆ ೨, ಪು-೧೫-೧೬

೮. ವೃಷಭೇಂದ್ರಾಚಾರ್, ಮುನ್ನಡೆಯ ಕೂಡ್ಲಿಗಿ, ಪು-೭೨

೯. ಜಗನ್ನಾಥ ನಿವೃತ್ತ ಶಿಕ್ಷಕರು ಕಾನಾಹೊಸಹಳ್ಳಿ, ನಿವಾಸಿಗಳು

೧೦. ಸುಂದರ ಅ. ಕರ್ನಾಟಕ ಚರಿತ್ರೆ ಸಂ ೧, ಪು-೯೫

೧೧. ಅದೇ ಪೂರ್ವೋಕ್ತ ಪು-೧೦೭

೧೨. ಶಿವತಾರಕ ಕೆ.ಬಿ, ಕರ್ನಾಟಕದ ಪುರಾತತ್ವ ನೆಲೆಗಳು, ಪು-೪

೧೩. ಸುಂದರ ಅ, ಪೂರ್ವೋಕ್ತ ಪು-೧೪೧

೧೪. ಅದೇ ಪೂರ್ವೋಕ್ತ ಪು-೧೧೬

೧೫. ಅದೇ ಪೂರ್ವೋಕ್ತ ಪು-೧೨೩

೧೬. ಅದೇ ಪೂರ್ವೋಕ್ತ ಪು-೧೨೪

೧೭. ಭೀಮಸಮುದ್ರ ರಂಗನಾಥ ಕೂಡ್ಲಿಗಿ ತಾಲೂಕಿನ ಪುರಾತತ್ವ ನೆಲೆಗಳು(ಅಪ್ರಕಟಿತ ಕೃತಿ)

೧೮. ಸುಂದರ ಅ, ಪೂರ್ವೋಕ್ತ ಪು-೧೩೯

೧೯. ಇರ್ಫಾನ ಹಬೀಬ್. ಪೂರ್ವತಿಹಾಸ ಪು-೮೦

೨೦. ಶಿವತಾರಕ ಕೆ.ಬಿ, ಪೂರ್ವೋಕ್ತ ಪು-೨೫೭

೨೧. ಭೀಮಸಮುದ್ರ ರಂಗನಾಥ ಪೂರ್ವೋಕ್ತ ಪು-೧೧

೨೨. ಶರ್ಮ ಆರ್.ಎಸ್, ಪ್ರಾಚೀನ ಭಾರತ ಪು-೪೨

೨೩. ಸುಂದರ ಅ, ಪೂರ್ವೋಕ್ತ ಪು-೬೮

೨೪. ರಾವ್ ಕೆ,ಪಿ, ಡೆಕ್ಕನ ಮೆಗಲಿಥಿಸ್, ಪು-೧

೨೫. ಜಯಣ್ಣ ಯು ಮೊಳಕಾಲ್ಮುರು ತಾಲೂಕಿನ ಪುರಾತತ್ವೀಯ ಪರಿಸರ ಅಪ್ರಕಟಿತ

ಪಿಎಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨, ಪು–೧೦೬

೨೬. ನನ್ನ ಅಧ್ಯಯನದ ಕ್ಷೇತ್ರಕಾರ್ಯದ ವರದಿ

೨೭. ಗಂಗಾಧರ ಗ್ರಾಮಸಹಾಯಕರು ತಿಪ್ಪೇಹಳ್ಳಿ

೨೮. ವಿರೂಪಾಕ್ಷಿ ಪೂಜಾರಹಳ್ಳಿ, ಕರೆಪೂಜಾರಹಳ್ಳಿ, ಕಟ್ಟಂಗನಹಳ್ಳಿ ಚಾರಿತ್ರಿಕ ಅಧ್ಯಯನ, ಇತಿಹಾಸ

ದರ್ಶನ ಸಂ–೧೯, ಪು–೩೩೬

೨೯. ಅದೇ

೩೦. ತಿಪ್ಪೇಸ್ವಾಮಿ ಹೆಚ್, ಕೂಡ್ಲಿಗಿ ತಾಲೂಕಿನಲ್ಲಿ ಪ್ರಾಗಿತಿಹಾಸಿಕ ನೆಲೆಗಳು, ಇತಿಹಾಸ ದರ್ಶನ ಸಂ–

೧೬, ೨೦೦೧–ಪು–೦೧

೩೧. ವೃಷಭೇಂದ್ರಾಚಾರ್, ಮುನ್ನಡೆಯ ಕೂಡ್ಲಿಗಿ, ಪು–೯

೩೨. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತು ಕಾಲೀನ ಬಳ್ಳಾರಿ ಜಿಲ್ಲೆ, ಪು–೮

೩೩. ವೃಷಭೇಂದ್ರಾಚಾರ್, ಪೂರ್ವೋಕ್ತ, ಪು–೯

೩೪. ವಾಸುದೇವ ಬಡಿಗೇರ, ಕಾರ್ತಿಕೇಯ ತಪೋವನ, ಪು–೯–೧೦

೩೫. ವೃಷಭೇಂದ್ರಾಚಾರ್, ಮುನ್ನಡೆಯ ಕೂಡ್ಲಿಗಿ, ಪು–೧೦

೩೬. ಅದೇ, ಪು–೧೦

೩೭. ಅದೇ, ಪು–೧೨

೩೮. ಅದೇ, ಪು–೧೨

೩೯. ಬಸವರಾಜ ಹೆಚ್, ಎಂ. ಗುಡೇಕೋಟೆ ಒಂದು ಚಾರಿತ್ರಿಕ ಅಧ್ಯಯನ ಪು–೨೬

೪೦. ವಿರೂಪಾಕ್ಷಿ ಪೂಜಾರಹಳ್ಳಿ ವಸಾಹತು ಕಾಲಿನ ಬಳ್ಳಾರಿ ಜಿಲ್ಲೆ, ಪು–೨೧

೪೧. ಅದೇ, ಪು–೩೫

೪೨. ಅದೇ, ಪು–೩೬

೪೩. ಅದೇ, ಪು–೩೭

೪೪. ಚನ್ನಬಸಪ್ಪ ಎಸ್, ಪಾಟೀಲ್, ವಿನೋದ ಪಾಟೀಲ್, ಬಳ್ಳಾರಿ ಜಿಲ್ಲೆಯ ಶಾಸನಗಳು,

ಪು–೧೫೨

## ಅಧ್ಯಾಯ ಮೂರು : ಕಲೆ ಮತ್ತು ವಾಸ್ತುಶಿಲ್ಪ

೩.೧ ಧಾರ್ಮಿಕ ವಾಸ್ತುಶಿಲ್ಪ

೩.೨ ಧಾರ್ಮಿಕ ಮೂರ್ತಿಶಿಲ್ಪ

೩.೩ ರಕ್ಷಣಾ ವಾಸ್ತುಶಿಲ್ಪ

೩.೪ ಸ್ಮಾರಕ ಶಿಲ್ಪಗಳು

## ಅಧ್ಯಾಯ ಮೂರು :

## ಕಲೆ ಮತ್ತು ವಾಸ್ತುಶಿಲ್ಪ

### ೩.೧. ಧಾರ್ಮಿಕ ವಾಸ್ತುಶಿಲ್ಪ

ವಾಸ್ತವವಾಗಿ ಕಲೆ ಎಂದರೆ ಮನುಷ್ಯನ ಭಾವನೆಗಳನ್ನು ಚಿತ್ರಿಸುವ ಮತ್ತು ಶಿಲ್ಪಕಲೆಗಳ ರೂಪದಲ್ಲಿ ತೋರಿಸುವುದೇ ಆಗಿದೆ, ಸಾಂಸ್ಕೃತಿಕ ಘಟನಾವಳಿಗಳ ವಿಶಿಷ್ಟ ರೂಪವೇ ಕಲೆ ಎಂದು ಹೇಳಬಹುದು. ಮಾನವನು ಅಲೆದಾಡುವ ಪ್ರವೃತಿಯಿಂದ ಒಂದಡೆ ನೆಲೆನಿಲ್ಲಲು ಆರಂಬಿಸಿದಾಗಿನಿಂದ ಅವನು ವಾಸಿಸಲು ತನಗೆ ಅನುಕೂಲವಾಗುವ ರೀತಿಯಲ್ಲಿ ಗೃಹ ನಿರ್ಮಿಸಲು ಆರಂಭಿಸಿದನು. ಇಲ್ಲಿಂದಲೇ ವಾಸ್ತುಶಿಲ್ಪವು ಆರಂಭವಾಯಿತೆನ್ನಬಹುದು. ಸಾಮಾನ್ಯವಾಗಿ ವಾಸ್ತು ಎಂದರೆ ಕಟ್ಟಡ, ಮನುಷ್ಯ ಹಾಗೂ ದೇವತೆಗಳು ವಾಸ ಮಾಡುವ ಸ್ಥಳ ಅಥವಾ ವಾಸಕ್ಕೆ ಮನೆಯನ್ನು ಕಟ್ಟಲು ಯೋಗ್ಯವಾದ ಭೂಮಿ ಇಂತಹ ಕಟ್ಟಡಗಳು ದೇವಾಲಯಗಳಾಗಿರಬಹುದು. ಕೋಟೆಕೊತ್ತಲಗಳಾಗಿರಬಹುದು.[೧]

ವಾಸ್ತುಶಿಲ್ಪ ಎಂಬ ಪರಿಭಾಷೆಗೆ ವಿಶಾಲವಾದ ಅರ್ಥ ಮತ್ತು ವ್ಯಾಪ್ತಿ ಇದ್ದರೂ ಸಾಮಾನ್ಯವಾಗಿ ದೇವಾಲಯಗಳು ಮಾತ್ರ ವಾಸ್ತುಶಿಲ್ಪಗಳಾಗಿ ಕಣ್ಮುಂದೆ ನಿಲ್ಲುತ್ತದೆ. ಈ ರೀತಿಯ ವಾಸ್ತುರಚನೆಗಳು ಮಾನವನ ನಾಗರೀಕತೆಯ ಮಾನದಂಡ ಎಂದರೂ ತಪ್ಪಾಗಲಾರದು. ಕಾಲಾಂತರದಲ್ಲಿ ಮಾನವನ ಬೌದ್ಧಿಕ ವಿಕಸನ ರೀತಿಯ ಖಚಿತತಗೆ ಪ್ರತ್ಯೇಕ್ಷ ಸಾಕ್ಷಿಗಳೆಂದು ಹೇಳಬಹುದು.[೧] ಸ್ತೂಪ, ಚೈತ್ಯ, ವಿಹಾರ, ಬಸದಿ, ಮಸೀದಿ, ಚರ್ಚ, ಕೆರೆಕಟ್ಟೆ, ಕೋಟೆ, ಬುರುಜು ಮನೆಗಳಂತಹ ಎಲ್ಲಾ ರಚನೆಗಳು ವಾಸ್ತುಶಿಲ್ಪಗಳೇ ಆಗಿವೆ.[೨] ಶುಕ್ರನ ಗ್ರಂಥವು ದೇವಾಲಯ ಅರಮನೆ-ರಾಜಗೃಹ ದೇವತಾ ಮೂರ್ತಿಗಳ ರಚನೆ. ಸರ್ವಜನೋಪಯೋಗಿ ಗೃಹಗಳು, ಬಾವಿ, ಪುಷ್ಕರಣಿ ಮುಂತಾದವುಗಳನ್ನು ಶಿಲ್ಪಶಾಸ್ತ್ರದಡಿಯಲ್ಲಿ ಗುರುತಿಸುತ್ತದೆ.[೩]

ವಾಸ್ತುವಿನ ಜೊತೆ ಜೊತೆಗೆ ಶಿಲ್ಪವು ಶಿಲ್ಪಿಯ ಅಭಿರುಚಿಗೆ ಅನುಗುಣವಾಗಿ ವಾಸ್ತುವಿಗೆ ವಿವಿಧ ಭಾಗಗಳಲ್ಲಿ ವ್ಯಕ್ತವಾಗಿರುವುದನ್ನು ನಾವು ಕಾಣುತ್ತೇವೆ. ವಾಸ್ತು ಮತ್ತು ಶಿಲ್ಪಗಳೆರಡೂ ಕಲಾ ಸೌಂದರ್ಯದ ಪ್ರತೀಕವಾಗಿದೆ. ಇವು ಆರಂಭದಿಂದಲೂ ಜೊತೆ ಜೊತೆಯಾಗಿಯೇ ಬೆಳೆದು ಬಂದಿರುವುದನ್ನು ಕಾಣಬಹುದು ಮಾನಸಾರ, ಮಾಯಮತ, ಕಶ್ಯಪ, ವೈಖಾಸನ, ವಿಶ್ವಕರ್ಮಿಯ ಇನ್ನೂ ಮೊದಲಾದ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ದೇವಾಲಯಗಳ ನಿರ್ಮಾಣ ಕುರಿತು ಅನೇಕ ವಿವರಗಳು ದೊರೆಯುತ್ತೇವೆ. ದುರಾದೃಷ್ಟವಶಾತ್ ಈ ಎಲ್ಲಾ ಗ್ರಂಥಗಳು ಪೂರ್ಣ ಪ್ರಮಾಣದಲ್ಲಿ

ದೊರೆಯದೇ ಇದ್ದದ್ದು, ದೇವಾಲಯಗಳು ಬಗ್ಗೆ ಇನ್ನೂ ಹೆಚ್ಚಿನ ವಿವರಗಳು ತಿಳಿದುಕೊಳ್ಳಲು ಸಾಧ್ಯವಾಗುತ್ತಿಲ್ಲ.[೪] ಆದರೂ ಮಾನಸಾರ ಗ್ರಂಥವು ಪ್ರತಿ ಅಧ್ಯಾಯದಲ್ಲೂ ದೇವಾಲಯಗಳ ನಿರ್ಮಾಣ ಉದ್ದೇಶ ಶಿಲ್ಪಕ್ಕೆ ಇರಬೇಕಾದ ಅರ್ಹತೆಗಳು ದೇವಾಲಯ ನಿರ್ಮಾಣಕ್ಕಿರುವ ಯೋಗ್ಯ ಸ್ಥಳ ದೇವಾಲಯಗಳನ್ನು ಗ್ರಾಮದ ನಗರಗಳ ಯಾವ ಭಾಗದಲ್ಲಿ ಯಾವ ದಿಕ್ಕಿನಲ್ಲಿ ಕಟ್ಟಬೇಕು. ಸ್ಥಳ, ವಿನ್ಯಾಸ, ಅಧಿಷ್ಠಾನ, ಶಿಖರ, ದೇವರುಗಳ ಪ್ರತಿಷ್ಠಾಪನೆ, ಪರಿವಾರ ದೇವರುಗಳ ಪ್ರತಿಷ್ಠಾಪನೆ ಇನ್ನೂ ಮುಂತಾದ ವಿವರಗಳನ್ನು ತಿಳಿಸುತ್ತದೆ.[೫]

ಮಯಮತ ಗ್ರಂಥವೂ ಮಾನಸಾರ ಕೃತಿಯಲ್ಲಿರುವ ವಿವರಗಳನ್ನು ಹೇಳುತ್ತಾ ಕಟ್ಟಡವನ್ನು ಕಟ್ಟಲು ಪ್ರಾರಂಭಿಸಿದಾಗ ವಾಸ್ತು ಪುರುಷನನ್ನು ತೃಪ್ತಿಪಡಿಸಲು ಮಾಡಬೇಕಾದ ಸಂಸ್ಕಾರ, ವಿಧಿವಿಧಾನಗಳನ್ನು ತಿಳಿಸುತ್ತದೆ. ದೇವಾಲಯದ ಉಪಪೀಠ, ಅಧಿಷ್ಠಾನ, ಭಿತ್ತಿ, ಪ್ರಸ್ತಾರ, ಕಟ್ಟಡದ ಮೇಲ್ಛಾವಣಿ ದೇವಾಲಯದ ಶಿಖರ, ಪ್ರಕಾರ, ಮಂಟಪಗಳು, ಬಲಿಪೀಠ ಇನ್ನೂ ಮುಂತಾದ ವಿವರಗಳನ್ನು ತಿಳಿಸುತ್ತದೆ, ಈ ಗ್ರಂಥದ ಕರ್ತೃ ಮಯ ಇರಬಹುದೆಂದು ಹೇಳಲಾಗುತ್ತದೆ.[೬] ದೇವಾಲಯಗಳು ಚರಿತ್ರೆಯ ರಚನೆಯಲ್ಲಿ ಪರಿಣಾಮಕಾರಿ ಮಾಧ್ಯಮಗಳಾಗಿ ಕಾರ್ಯ ನಿರ್ವಹಿಸುತ್ತವೆ, ಇವುಗಳು ಮಾನವನ ಚರಿತ್ರೆ ಮತ್ತು ಅವನ ಕಾಲದ ವಿಭಿನ್ನ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ಸಾಮಾನ್ಯ ದೇವಾಲಯ ಎಂದರೆ ದೇವರು ಇರತಕ್ಕ ಸ್ಥಾನ, ಎಡೆ, ಜಾಗ, ಎಂದರ್ಥ.[೭]

ದೇವಾಲಯವು ಧಾರ್ಮಿಕ ಶ್ರದ್ಧೆಯ ಪ್ರಮುಖ ಅಂಶವಾಗಿದೆ, ಇದಕ್ಕೆ ತನ್ನದೇ ಅದ ಸಂಸ್ಕೃತಿ ಭವ್ಯ ಪರಂಪರೆ ಇದೆ ಮಾನವ ದೈವ ಇಹಪರ ವಾಸ್ತವಿಕ ಆದರ್ಶ ಇವುಗಳ ಮಿಲನದ ಸಂಕೇತವೇ ದೇವಾಲಯ[೮] ಲೋಕ ಸಂರಕ್ಷಣೆಗಾಗಿ ಭಗವಂತನು ಭೂಮಿಯಲ್ಲಿ ವಾಸ ಮಾಡುವ ಸ್ಥಳವಾದ ದೇವಾಲಯವು ಜೀವಾತ್ಮ ಮತ್ತು ಪರಮಾತ್ಮದಲ್ಲಿ ಇರುವ ಅಂತರವನ್ನು ಬಹುಮಟ್ಟಿಗೆ ಕಡಿಮೆ ಮಾಡುತ್ತದೆ. ಜಗತ್ತಿನ ಸೃಷ್ಟಿಕರ್ತ ಹಾಗೂ ನಿಯಂತ್ರಿಕನಾದ ದೇವರ ಬಳಿಗೆ ಹೋಗಲು ಸರಿಯಾದ ಮಾರ್ಗವನ್ನು ತೋರಿಸುವಂತೆ ಅವನನ್ನು ಪ್ರಾರ್ಥಿಸುವ ಸ್ಥಳವೂ ದೇವಾಲಯವೇ ಆಗಿದೆ ಎಂದು ಹೇಳಬಹುದು.[೯]

ದೇವಾಲಯದ ಉಗಮವು ಬಹು ಪ್ರಾಚೀನತೆಯನ್ನು ಪಡೆದಿರುವುದು ಆದರೆ ಅವುಗಳ ನಿದಿಷ್ಟ ಸ್ವರೂಪ ವ್ಯಕ್ತವಾಗಿರುವುದಿಲ್ಲ. ಕ್ರಿ.ಪೂ.೩೦೦೦ ವರ್ಷಗಳಷ್ಟು ಹಿಂದಿನ ಹರಪ್ಪ ಮತ್ತು ಮೆಹೆಂಜೋದಾರೋ ಉತ್ಖನಗಳಲ್ಲಿ ಸಾರ್ವತ್ರಿಕ ಕಟ್ಟಡಗಳು ದೊರತರೂ ದೇವಾಲಯಗಳು ಎನ್ನ ಬಹುದಾದ ರಚನೆ ಕಾಣುವುದಿಲ್ಲ. ಈ ನಿವೇಶನಗಳಲ್ಲಿ ದೊರೆತಿರುವ ಸುಮಾರು ೨೦೦೦ಕ್ಕೂ

ಅಧಿಕ ಮುದ್ರೆಗಳು ಮೆಹೆಂಜೋದಾರೋದಲ್ಲಿ ದೊರೆತ ಕಂಚಿನ ವಿಗ್ರಹ, ಪಶುಪತಿ, ಶಿವ, ಗೂಳಿ, ಇತರೆ ಪ್ರಾಣಿ ಆಟಿಕೆ ವಸ್ತುಗಳು ಮತ್ತು ಚಿತ್ರಿತ ಮಡಿಕೆಗಳು ಅವರ ಕಲಾಸಕ್ತಿಗೆ ಸಾಕ್ಷಿಗಳಾಗಿವೆ, ಇವುಗಳಿಂದ ನಮ್ಮಗೆ ಒಂದು ಅಂಶ ಸ್ಪಷ್ಟವಾಗುತ್ತದೆ. ಏನೆಂದರೆ ದೇವಾಲಯಗಳ ರಚನೆಗೂ ಪೂರ್ವದಲ್ಲಿ ಮೂರ್ತಿಶಿಲ್ಪದ ಬೆಳವಣಿಗೆ ಹಾಗೂ ಆರಾಧನೆ ಇತ್ತೆಂದು ಹೇಳಬಹುದು ಮೂರ್ತಿ ಆರಾಧನೆಯ ಆರಂಭವಾದ ಬಳಿಕ ಅದರ ರಕ್ಷಣೆಗಾಗಿ ವಾಸ್ತುರೂಪ ನೀಡಲಾಯಿತು.

ಕ್ರಿಪೂ. ೩ನೇ ಶತಮಾನದ ವೇಳೆಗೆ ಭಾರತೀಯ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ ಕೀರ್ತಿ ಮೌರ್ಯ ಅರಸರಿಗೆ ಸಲ್ಲುತ್ತದೆ. ಗುಪ್ತರು ಮೊಟ್ಟ ಮೊದಲ ಬಾರಿಗೆ ಕಲ್ಲಿನಿಂದ ಕಟ್ಟಡ ರೂಪದ ದೇವಾಲಯಗಳನ್ನು ಕಟ್ಟಲು ಪ್ರಾರಂಭಿಸಿದರು. ಕರ್ನಾಟಕದಲ್ಲಿ ಕದಂಬರ ಅವಧಿಯಲ್ಲಿ ಶಿಲಾವಸ್ತುವಿನಂದ ನಿರ್ಮಿಸಿದ ದೇವಾಲಯಗಳನ್ನು ಕಾಣಬಹುದು. ಬಾದಾಮಿ ಚಾಲುಕ್ಯರು ಹಾಗೂ ಪಲ್ಲವರು ಸಹ ದಕ್ಷಿಣ ಭಾರತದಲ್ಲಿ ಮೊಟ್ಟ ಮೊದಲ ಬಾರಿಗೆ ಶಿಲೆಯಿಂದ ಬಿಡಿ ಬಿಡಿಯಾದ ದೇವಾಲಯಗಳನ್ನೂ ನಿರ್ಮಿಸಿದರು. ನಂತರದ ರಾಷ್ಟ್ರಕೂಟರ ಅವಧಿಯಲ್ಲಿ ಕಲೆ ಮತ್ತು ವಾಸ್ತುಶಿಲ್ಪವು ಗಟ್ಟಿಯಾದ ಮತ್ತು ಸ್ಪಷ್ಟವಾದ ಸ್ವರೂಪವನ್ನು ಪಡೆಯಿತು. ಕಾನಾಹೊಸಹಳ್ಳಿ ಪರಿಸರದಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಸಾಮನ್ಯವಾಗಿ ಕಂಡುಬಂದಿವೆ, ಇವರು ಕೆರೆ, ನದಿ, ಹಳ್ಳ-ಕೊಳ್ಳ, ದಂಡೆಯ ಮೇಲೆ ದೇವಾಲಯಗಳನ್ನೇ ಹೆಚ್ಚಾಗಿ ನಿರ್ಮಿಸಿದ್ದಾರೆ. ಇವರ ದೇವಾಲಯಗಳು ಸೂಕ್ಷ್ಮಕೆತ್ತನೆ ಹಾಗೂ ಅಲಂಕಾರಿಕ ಅಂಶಗಳನ್ನ ಕಾಣಬಹುದು. ವಿಜಯನಗರ ಅರಸರ ದೇವಾಲಯಗಳನ್ನು ನಿರ್ಮಿಸಲು ಗ್ರಾನ್ಯೆಟ್ ಶಿಲೆ ಯನ್ನು ಬಳಸಿದ್ದರಿಂದ ಹೆಚ್ಚಿನ ಅಲಂಕಾರಿಕ ಅಂಶಗಳು ಕಂಡುಬರುವುದಿಲ್ಲ.



ವಿಜಯನಗರ ಪತನ ನಂತರ ಪಾಳೇಯಗಾರರು ಅವರ ರಾಜ್ಯಡಳಿತ ಕ್ರಮ ಸಂಸ್ಕೃತಿಯನ್ನು ಅನುಸರಿಸಿ ಕಾಪಾಡಿಕೊಂಡು ಬಂದರು. ಪಾಳೆಯಗಾರರ ಅಳ್ವಿಕೆಯಲ್ಲಿ ವಿಜಯನಗರ ಅರಸರ ವೈಭವದಿಂದ ಇದ್ದರು ತಕ್ಕ ಮಟ್ಟಿಗೆ ದೇವಾಲಯಗಳನ್ನು ಉಳಿಸಿಕೊಂಡು ಬಂದಿದ್ದಾರೆ, ಇವರ ಶೈಲಿಯನ್ನು ವಿಜಯನಗರೋತ್ತರ ಶೈಲಿ ಎಂದು ಕರೆಯಬಹುದು.

ಸಂಖ್ಯೆ : ೦೧

ಸ್ಮಾರಕ ಹೆಸರು : ಆಂಜನೇಯ ದೇವಾಲಯ

ಊರು : ಕಾನಹೊಸಹಳ್ಳಿ

ಶೈಲಿ : ವಿಜಯನಗರೋತ್ತರ

ಅಭಿಮುಖ : ದಕ್ಷಿಣಾಭಿಮುಖ

ಸ್ಥಳ : ಗ್ರಾಮದ ದ್ವಾರ ಬಾಗಿಲಿನ ಪಕ್ಕದಲ್ಲಿ ಸ್ಥಿತಿ : ಉತ್ತಮ

ಕಾಲ : ೧೮ನೇ ಶತಮಾನ ಸಂರಕ್ಷಣೆ :

ಈ ದೇವಾಲಯವು ಕಾನಹೊಸಹಳ್ಳಿ ಗ್ರಾಮದ ದ್ವಾರ ಬಾಗಿಲಿನ ಪಕ್ಕದಲ್ಲಿದ್ದು ದಕ್ಷಿಣಭಿಮುಖವಾಗಿ ನಿರ್ಮಾಣ ಮಾಡಿದ್ದಾರೆ. ದೇವಾಲಯದ ಗರ್ಭಗೃಹ ನವರಂಗ ಅಧುನಿಕವಾಗಿ ನಿರ್ಮಾಣಗೊಂಡಿದೆ. ಗರ್ಭಗೃಹದ ದ್ವಾರ ಪಟ್ಟಿಕೆಯಲ್ಲಿ ಹೂವುಬಳ್ಳಿಗಳ ಹಾಗೂ ಲಲಾಟಬಿಂಬದಲ್ಲಿ ಪುಷ್ಪವುವಿದ್ದು. ಅಕ್ಕಪಕ್ಕದಲ್ಲಿ ಸೂರ್ಯ-ಚಂದ್ರ ಇರುವುದನ್ನು ಕಾಣುತ್ತವೆ. ಗರ್ಭಗೃಹದಲ್ಲಿ ಆಂಜನೇಯನ ಉಬ್ಬುಶಿಲ್ಪವು ಬಹಳ ಸುಂದರವಾಗಿ ಕಂಗೋಳಿಸುತ್ತದೆ. ಗರ್ಭಗೃಹದ ಮುಂದಿನ ಭಾಗದಲ್ಲಿ ಆರು ಅರ್ಧಕಂಬ ಹಾಗೂ ನಾಲ್ಕು ಪೂರ್ಣ ಕಂಬಗಳಿಂದ ಕೂಡಿದೆ.

ದೇವಾಸ್ಥಾನದ ಪಶ್ಚಿಮ ದಿಕ್ಕಿನಲ್ಲಿ ನವಗ್ರಹಗಳಾದ ಸೂರ್ಯ, ಚಂದ್ರ, ಬುಧ, ಗುರು, ಶುಕ್ರ, ಶನಿ, ಕುಜು, ರಾಹು, ಕೇತು ಕಪ್ಪು ಶಿಲೆಯಿಂದ ನಿರ್ಮಿತಗೊಂಡಿದೆ. ಅಲ್ಲದೇ ದೇವಾಸ್ಥಾನದ ಮುಂಭಾಗದಲ್ಲಿ ದ್ವೀಪ ಸ್ತಂಭವನ್ನು ಕಾಣುತ್ತವೆ. ಗರ್ಭಗೃಹದ ಮೇಲಿನ ಭಾಗದ ಶಿಖರವು ಗಾರೆಯಿಂದ ನಿರ್ಮಿಸಿದ್ದಾರೆ. ಈ ಶಿಖರದಲ್ಲಿ ಗಾರೆ ಶಿಲ್ಪಗಳನ್ನು ಹಾಗೂ ಹೂಬಳ್ಳಿಗಳನ್ನು ಕಾಣುತ್ತವೆ. ಕಳಶವು ಆಕರ್ಷಕವಾಗಿ ಹೊಳೆಯುತ್ತದೆ.

ನವಗ್ರಹಗಳು :

ನವಗ್ರಹಗಳ ಪೂಜಿ ಸ್ಮತಿಗಳ ಕಾಲದಲ್ಲಿಯೋ ಕಾಣಿಸಿಕೊಳ್ಳುತ್ತದೆ. ಜನರ ಆಯುಷ್ಯಕ್ಕೂ ಸ್ಥಿತಿಗತಿಗಳಿಗೂ ಸಂಕಟ ಸಂತೋಷಗಳಿಗೂ ನವಗ್ರಹಗಳೇ ಕಾರಣವೆನ್ನುವ ನಂಬಿಕೆಯೂ ಹಳೆಯದು, ನವಗ್ರಹಗಳಿಗೆ ಪ್ರತೇಕವಾದ ಗುಡಿಯು ಅಪರೂಪವಾದರು ಎಲ್ಲಾ ದೇವಾಲಯಗಳಲ್ಲಿಯೂ ವಿಶೇಷವಾಗಿ ಶಿವ ಮತ್ತು ಆಂಜಿನೇಯ ದೇವಾಲಯಗಳಲ್ಲಿ ನವಗ್ರಹಗಳಿಗೆ ಪ್ರತೇಕವಾಗಿ ಜಾಗವಿರುವುದು ವಾಡಿಕೆ ನವಗ್ರಹಗಳ ಪೂಜೆ ಮನೆಗಳಲ್ಲಿ ವಿಶೇಷ ಸಂದರ್ಭಗಳಲ್ಲಿ ನಡೆಯುತ್ತದೆ. ಗೃಹಶಾಂತಿಯಂತೂ ಎಲ್ಲರಿಗೂ ತಿಳಿದ ವಿಚಾರವೇ ವ್ಯವಹಾರದ ವಾರದ ದಿನಗಳ ಹೆಸರುಗಳನ್ನು ಅಧಿಕರಿಸಿವೆ, ನವಗ್ರಹಗಳೆಂದರೆ ಸೂರ್ಯ, ಚಂದ್ರ, ಬುಧ, ಗುರು, ಶುಕ್ರ, ಶನಿ, ಕುಜು, ರಾಹು, ಕೇತು ಇವರಲ್ಲಿ ಸೂರ್ಯನೇ ಪ್ರಮುಖವಾದವನು.

ಸಂಖ್ಯೆ : ೦೨

ಸ್ಮಾರಕ ಹೆಸರು : ಆಂಜನೇಯ ದೇವಾಲಯ ಶೈಲಿ : ವಿಜಯನಗರೋತ್ತರ

ಊರು : ಕೆಂಚಮಲ್ಲನಹಳ್ಳಿ

ಅಭಿಮುಖ : ದಕ್ಷಿಣಾಭಿಮುಖ

ಸ್ಥಳ : ಬಸ್‌ಸ್ಟ್ಯಾಂಡ ಹಿಂಭಾಗ

ಸ್ಥಿತಿ : ಸಾಧಾರಣ

ಕಾಲ : ೧೭ ಮತ್ತು ೧೮ನೇ ಶತಮಾನ

ಸಂರಕ್ಷಣೆ : ಶ್ರೀ ಗುರುದತ್ತಾಂಜನೇಯ ಸೇವಾಟ್ರಸ್ಟ (ರಿ)

ಈ ದೇವಾಲಯವು ಕಾನಾಹೊಸಹಳ್ಳಿ ಹೋಬಳಿ ಕೇಂದ್ರದಿಂದ ೧೬ ಕಿ.ಮೀ. ದೂರದ ಗಡಿಗ್ರಾಮವಾದ ಕೆಂಚಮಲ್ಲನಹಳ್ಳಿಯಲ್ಲಿದೆ. ಗರ್ಭಗೃಹದ ಬಾಗಿಲುವಾಡವು ಲೋಹದ ಪಟ್ಟಿಕೆಯಿಂದ ಕೂಡಿದ್ದು ವಿವಿಧ ರೀತಿಯಾದ ಹೊಬಳ್ಳಿಗಳಿಂದ ಅಲಂಕೃತಗೊಂಡಿದೆ. ಗರ್ಭಗೃಹದಲ್ಲಿನ ಆಂಜಿನೇಯ ಶಿಲ್ಪವು ಕಪ್ಪುಶಿಲೆಯಿಂದ ಕೂಡಿದ್ದು. ೮.೫ ಅಡಿ ಎತ್ತರ ಹಾಗೂ ೪.೧ ಅಡಿ ಅಗಲ ವಿಸ್ತೀರ್ಣವನ್ನು ಹೊಂದಿದೆ, ಗರ್ಭಗೃಹವು ನಾಲ್ಕು ಕಂಬಗಳಿಂದ ಕೂಡಿದೆ. ಪ್ರಾಂಗಣದಲ್ಲಿ ನಾಲ್ಕು ಪೂರ್ಣಕಂಬಗಳ ಹಾಗೂ ಅರೆಕಂಬಗಳು ಚಚೌಕಕಾರವಾಗಿದೆ. ಕಂಬಗಳಲ್ಲಿ ಮತ್ತು ಬಿತ್ತಿಭಾಗದಲ್ಲಿ ಯಾವುದೇ ಅಲಂಕಾರವಾದ ಕೆತ್ತನೆಗಳು ಕಂಡುಬಂದಿಲ್ಲ ಈ ದೇವಾಲಯದ ಮೇಲ್ಛಾವಣಿಯ ಬಂಡೆಗಳಿಂದ ಹಾಸಲಾಗಿದೆ. ಪ್ರಾಂಗಣದ ಬಲ ಬದಿಯಲ್ಲಿ ಶಿವಲಿಂಗವನ್ನು ಕಾಣುತ್ತೇವೆ.

ಇದರ ಸುತ್ತಳತೆ ೨೦ ಇಂಚು, ಉದ್ದ ೩೧ ಇಂಚು , ಅಗಲ ೧೭ ಇಂಚು. ವಿಸ್ತಿರ್ಣ ಹೊಂದಿದೆ. ಈ ದೇವಾಲಯದ ಮುಂಭಾಗದಲ್ಲಿ ಸುಮಾರು ೨೫ ಅಡಿ ಎತ್ತರದ ದ್ವೀಪಸ್ತಂಭ ಕಾಣುತ್ತೇವೆ, ನಂತರ ದ್ವೀಪಸ್ತಂಭದ ಕಟ್ಟೆಯ ಮೇಲೆ ಗಜಲಕ್ಷ್ಮೀ ಶಿಲ್ಪವನ್ನು ಕಾಣಬಹುದು, ಇದು ಅಗಲ ಹಾಗೂ ೨೯ ಇಂಚು ಎತ್ತರವಾಗಿದೆ. ಹಾಗೇ ಇದೆ ಕಟ್ಟೆಯ ಮೇಲೆ ನಂದಿಶಿಲ್ಪವನ್ನು ಸಹ ಕಾಣುತ್ತವೆ, ಇದರ ವಿಸ್ತೀರ್ಣವು ಉದ್ದ೩೧ ಅಗಲ ೧೩ ಇಂಚು ಹೊಂದಿದೆ.

ಕೊರಳಿನಲ್ಲಿ ಸರಮಾಲೆಯೊಂದಿಗೆ, ಗಂಟೆ ಹೊಂದಿದೆ. ಕುಳಿತಿರುವ ಭಂಗಿಯ ನಂದಿಶಿಲ್ಪ ಕಪ್ಪುಶಿಲೆಯಿಂದ ನಿರ್ಮಾಣವಾಗಿದೆ. ಇಲ್ಲಿ ದೀಪೋತ್ಸವ ಮತ್ತು ಪಲ್ಲಕಿ ಉತ್ಸಾಹದೊಂದಿಗೆ ಸಾಂಸ್ಕೃತಿಕ ಆಚರಣೆಗಳನ್ನು ಕಾಣುತ್ತೇವೆ. ನಾನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಇಲ್ಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಹಲವಾರು ಸಮಸ್ಯೆಗಳ ಕಂಡುಬಂದವು ಅವುಗಳೆಂದರೆ. ಈ ಶಿಲ್ಪಗಳ ಮೂಲ ಸ್ಥಳವೇ ಅಥವಾ ಬೇರೆ ಸ್ಥಳದಿಂದ ಸ್ಥಳಾಂತರ ಗೊಂಡಿವೆ ಎಂಬ ಪ್ರಶ್ನೆಗಳಿಗೆ ಈ ದೇವಾಲಯದ ಅರ್ಚಕರು ಮತ್ತು ಸ್ಥಳೀಯರು ಹೇಳುವಾಗೇ ಕರ್ಣಂ ಲಕ್ಷ್ಮೀಪತಿಭಟ್ಟರು ಶಾನುಭೋಗ ಕೆಲಸ ಸಿಕ್ಕಿದ್ದರಿಂದ ಭೂಪ್ಪಸಮುದ್ರ ದಿಂದ ಆಂಜಿನೇಯ ಶಿಲ್ಪ, ಶಿವಲಿಂಗ,

ನಂದಿಶಿಲ್ಪ, ಗಜಲಕ್ಷ್ಮೀ ಶಿಲ್ಪಗಳನ್ನೂ ಕೆಂಚಮಲ್ಲನಹಳ್ಳಿಗೆ ತಂದು ಸೇವೆ ಸಲ್ಲಿಸುತ್ತಿದ್ದರು ಎಂದು ತಿಳಿಸಿದರು.

ಸಂಖ್ಯೆ : ೦೩

ಸ್ಮಾರಕ ಹೆಸರು : ಆಂಜನೇಯ ದೇವಾಲಯ
ಶೈಲಿ : ಅಧುನಿಕ ಶೈಲಿ
ಊರು : ರಂಗನಾಥನಹಳ್ಳಿ
ಅಭಿಮುಖ : ದಕ್ಷಿಣ
ಸ್ಥಳ : ಗ್ರಾಮದ ಮಧ್ಯ
ಸ್ಥಿತಿ : ಉತ್ತಮ
ಕಾಲ : ೨೦ನೇ ಶತಮಾನ
ಸಂರಕ್ಷಣೆ :

ಈ ದೇವಾಲಯವು ಕಾನಾಹೊಸಹಳ್ಳಿ ಯಿಂದ ೫ ಕಿ.ಮೀ. ದೂರದದಲ್ಲಿರುವ ರಂಗನಾಥನಹಳ್ಳಿ ಗ್ರಾಮದ ಮಧ್ಯದಲ್ಲಿದೆ. ಗರ್ಭಗೃಹದಲ್ಲಿ ಕಪ್ಪುಶಿಲೆಯಿಂದ ನಿರ್ಮಾಣವಾದ ಆಂಜನೇಯ ಶಿಲ್ಪವಿದೆ. ಗರ್ಭಗೃಹದ ಬಾಗಿಲು ವಾಡದಲ್ಲಿ ಹೂಬಳ್ಳಿಗಳ ಚಿತ್ರಣ ಹಾಗೂ ನವಿಲುಗಳ ಚಿತ್ರಣ ಕಾಣಬಹುದು. ಸಭಾಮಂಟಪದಲ್ಲಿ ನಾಲ್ಕು ಕಂಬಗಳ ಚಚೌಕವಾಗಿದ್ದು ವಿವಿಧ ರೀತಿಯಾದ ಕೆತ್ತನೆಗಳಿಂದ ಕೂಡಿರುವುದು. ಉಳಿದ ಕಂಬಗಳ ಬಿತ್ತಿಯೊಂದಿಗೆ ಸೇರಿಕೊಂಡಿವೆ. ಈ ದೇವಾಲಯದ ಪ್ರವೇಶಕ್ಕೆ ಸೋಪಾನಗಳನ್ನು ನಿರ್ಮಿಸಿದ್ದಾರೆ, ಹಾಗೂ ಇತ್ತೀಚೆಗೆ ದೇವಾಲಯದ ಮುಂಭಾಗದ ಎರಡು ಕಡೆಗೆ ಕಟಾಂಜನ ನಿರ್ಮಿಸಿಕೊಂಡಿದ್ದಾರೆ, ಪ್ರತಿ ಶನಿವಾರವು ಸ್ಥಳೀಯರು ವಿಶೇಷ ಆಚರಣೆಗಳನ್ನು ಮಾಡಿಕೊಂಡು ಬಂದಿರುವುದನ್ನು ಕಾಣಬಹುದು.

ಸಂಖ್ಯೆ : ೦೪

ಸ್ಮಾರಕ ಹೆಸರು : ಈಶ್ವರ ದೇವಾಲಯ
ಶೈಲಿ : ವಿಜಯನಗರೋತ್ತರ
ಊರು : ಕೆಂಚಮಲ್ಲನಹಳ್ಳಿ
ಅಭಿಮುಖ : ಪೂರ್ವ
ಸ್ಥಳ : ಗ್ರಾಮದ ಮಧ್ಯ
ಸ್ಥಿತಿ : ಉತ್ತಮ
ಕಾಲ : ೧೯ನೇ ಶತಮಾನ
ಸಂರಕ್ಷಣೆ : ಸ್ಥಳೀಯರು

ಈ ದೇವಾಲಯವು ಕಾನಾಹೊಸಹಳ್ಳಿ ಹೋಬಳಿ ವ್ಯಾಪ್ತಿಯಲ್ಲಿರುವ ಕೆಂಚಮಲ್ಲನಹಳ್ಳಿ ಗ್ರಾಮದ ಮಧ್ಯದಲ್ಲಿದೆ ೧೯ನೇ ಶತಮಾನದಲ್ಲಿ ಕಟ್ಟಲಾದ ಈ ದೇವಾಲಯದಲ್ಲಿ ಗರ್ಭಗೃಹ, ಸಭಾಮಂಟಪ ಹಾಗೂ ಮುಖಮಂಟಪಗಳಿವೆ. ಗರ್ಭಗೃಹದಲ್ಲಿನ ಶಿವಲಿಂಗವು ಕಪ್ಪುಶಿಲೆಯಿಂದ

ಕೂಡಿದೆ. ಸಭಾಮಂಟಪದಲ್ಲಿರುವ ನಂದಿ ಕಪ್ಪುಶಿಲೆಯಿಂದ ಕೂಡಿದೆ. ಸಭಾಮಂಟಪದ ಕಂಬಗಳು ಚಚೌಕಕಾರವಾಗಿದ್ದು ಯಾವುದೇ ಅಲಂಕರಣೆ ಹೊಂದಿರುವುದಿಲ್ಲ ಸಭಾಮಂಟಪದಲ್ಲಿ ಕಟಾಂಜನವನ್ನು ಇತ್ತೀಚೆಗೆ ಕಟ್ಟಲಾಗಿದೆ. ಸಭಾಮಂಟಪದ ಮೇಲ್ಭಾಗದ ಕೈಪಿಡಿಗೋಡೆಯಲ್ಲಿ ನಂದಿ, ಸಿಂಹ ಮತ್ತಿತರ ಗಾರೆಯಲ್ಲಿ ಮಾಡಲಾದ ಶಿಲ್ಪಗಳನ್ನು ಕಾಣಬಹುದು.

ಸಂಖ್ಯೆ : ೦೫

ಸ್ಮಾರಕ ಹೆಸರು : ಈಶ್ವರ ದೇವಾಲಯ | ಶೈಲಿ : ವಿಜಯನಗರೋತ್ತರ

ಊರು : ಬಣವಿಕಲ್ಲು | ಅಭಿಮುಖ : ಪೂರ್ವ

ಸ್ಥಳ : ಗ್ರಾಮದ ದಕ್ಷಿಣಕ್ಕೆ | ಸ್ಥಿತಿ : ಉತ್ತಮ

ಕಾಲ : ೧೭ನೇ ಶತಮಾನ | ಸಂರಕ್ಷಣೆ : ಸ್ಥಳೀಯರು ಟ್ರಸ್ಟ ಮೂಲಕ

ಈ ದೇವಾಲಯವು ಕಾನಾಹೊಸಹಳ್ಳಿ ಹೋಬಳಿ ಕೇಂದ್ರದಿಂದ ೧೫ ಕಿ.ಮೀ. ದೂರದಲ್ಲಿರುವ ಬಣವಿಕಲ್ಲು ಗ್ರಾಮದ ಹೊರವಲಯಕ್ಕೆ ದಕ್ಷಿಣ ದಿಕ್ಕಿಗೆ ಇದೆ. ಗರ್ಭಗೃಹ ಹಾಗೂ ಸಭಾಮಂಟಪವನ್ನು ಹೊಂದಿದ್ದು ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಕಪ್ಪು ಶಿಲೆಯ ಶಿವಲಿಂಗವಿದೆ. ಗರ್ಭಗೃಹದ ಬಾಗಿಲುವಾಡದಲ್ಲಿ ತ್ರಿಶೂಲ, ಡಮರು ಮತ್ತು ಗದೆಗಳನ್ನು ಹಿಡಿದು ನಿಂತ್ತಿರುವ ಶೈವದ್ವಾರ ಪಾಲಕರಿದ್ದಾರೆ. ಲಲಾಟ ಬಿಂಬದಲ್ಲಿ ಶಿವಲಿಂಗದ ಉಬ್ಬಶಿಲ್ಪವಿದೆ. ಗರ್ಭಗೃಹಕ್ಕೆ ಅಭಿಮುಖವಾಗಿ ಸಭಾ ಮಂಟಪದಲ್ಲಿ ಕಪ್ಪುಶಿಲೆಯಿಂದ ಕೂಡಿರುವ ನಂದಿಶಿಲ್ಪವನ್ನು ಕಾಣುತ್ತೇವೆ. ಈ ದೇವಾಲಯದಲ್ಲಿ ಗರ್ಭಗೃಹ ಮತ್ತು ಸಭಾಮಂಟಪ ಒಳಗೊಂಡಂತೆ ಒಟ್ಟು ಹತ್ತು ಅರೆಗಂಬಗಳು ಹಾಗೂ ನಾಲ್ಕು ಪೂರ್ಣ ಕಂಬಗಳು ಚೌಕಕಾರವಾಗಿದು ಸರಳವಾದ ಕೆತ್ತನೆಗಳಿಂದ ಕೂಡಿದೆ, ಈ ದೇವಾಲಯಕ್ಕೆ ಸರಳವಾದ ಸೋಪಾನಗಳಿವೆ.

ಆಚರಣೆ

ಈ ದೇವಾಲಯ ಇರುವ ಸ್ಥಳದ ಸುತ್ತಮುತ್ತ ಮೊದಲು ಆಲದ ಬೊಮ್ಮನಹಳ್ಳಿ ಎಂಬ ಗ್ರಾಮ ಇತ್ತು. ಕಾಲನಂತರ ಅನೇಕ ಕಾರಣಗಳಿಂದ ಇಲ್ಲಿನ ಜನರು ನೆಲಬೊಮ್ಮನಹಳ್ಳಿ ಮತ್ತು ಬಣವಿಕಲ್ಲಿನಲ್ಲಿ ನಿವಾಸ ಮಾಡಿಕೊಂಡರು. ಆದರು ಸಹ ಬಣವಿಕಲ್ಲು ಗ್ರಾಮದ ಸ್ಥಳೀಯರು ಪ್ರತಿ ಸೋಮವಾರ ಮತ್ತು ಗುರುವಾರ ವಿಶೇಷ ಪೂಜೆ ಸಲ್ಲಿಸುತ್ತಾರೆ. ಶಿವರಾತ್ರಿ ದಿನದಂದು ಬಜನೆ ಅಭಿಷೇಕ ದಾಸೋಹ ಸೇರಿದಂತೆ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳನ್ನು ಮಾಡುತ್ತಾ ಬಂದಿದ್ದಾರೆ. ಈ ದೇವಾಲಯವು ಸರ್ವೆ ನಂ ೪೯ ಹಾಗೂ ವಿಸ್ತೀರ್ಣ ೧೯೬ ನಕಾಶೆ ದೇವಾಸ್ಥಾನ ಎಂದು ದಾಖಲಾಗಿದೆ.

ಸಂಖ್ಯೆ : ೦೬

ಸ್ಮಾರಕ ಹೆಸರು : ಈಶ್ವರ ದೇವಾಲಯ

ಊರು : ಹುಡೇಂ

ಸ್ಥಳ : ಗ್ರಾಮದ ಮಧ್ಯ

ಕಾಲ : ೧೨-೧೩ನೇ ಶತಮಾನ

ಶೈಲಿ : ಕಲ್ಯಾಣ ಚಾಲುಕ್ಯರು

ಅಭಿಮುಖ : ಪೂರ್ವ

ಸ್ಥಿತಿ : ಉತ್ತಮ

ಸಂರಕ್ಷಣೆ : ಸ್ಥಳೀಯ ಗ್ರಾಮಸ್ಥರು

ಈ ದೇವಾಲಯವು ಕಾನಾಹೊಸಹಳ್ಳಿಯಿಂದ ೧೪ ಕಿ.ಮೀ.ದೂರದಲ್ಲಿರುವ ಹುಡೇಂ ಗ್ರಾಮದ ಮಧ್ಯದಲ್ಲಿದೆ. ಈಶ್ವರ ದೇವಾಲಯವು ಪೂರ್ವ ಅಭಿಮುಖವಾಗಿದೆ. ಹಾಗೂ ಊರಿನ ಪ್ರವೇಶ ದ್ವಾರದ ರಸ್ತೆಯಲ್ಲಿ ಕಂಡುಬರುವುದು. ಗರ್ಭಗೃಹದಲ್ಲಿ ಎತ್ತರವಾದ ಕಪ್ಪುಶಿಲೆಯ ಪೀಠದ ಮೇಲೆ ಈಶ್ವರನ ಲೋಹದ ಪ್ರತೀಮೆ ಇದೆ. ಗರ್ಭಗೃಹದಲ್ಲಿ ನಾಲ್ಕು ಕಂಬಗಳಿಂದ ನಿರ್ಮಾಣಗೊಂಡಿದೆ. ಹಾಗೂ ಗರ್ಭಗೃಹದ ಒಳಗಿನ ಭಿತ್ತಿಯಲ್ಲಿ ದೇವಾಲಯದ ಪೂಜೆ ಪರಿಕರಗಳನ್ನು ಇಡಲು ಅಟ್ಟಣಿಗೆಯನ್ನು ಕಾಣಬಹುದು. ಭುವನೇಶ್ವರಿಯು ಸರಳ ಕೆತ್ತನೆಯಿಂದ ಕೂಡಿದೆ ಗರ್ಭಗೃಹಕ್ಕೆ ಅಭಿಮುಖವಾಗಿ ಸಭಾಮಂಟಪದಲ್ಲಿರುವ ನಂದಿಶಿಲ್ಪವು ಕಪ್ಪುಶಿಲೆಯಿಂದ ಕೂಡಿದೆ. ಸಭಾಮಂಟಪದಲ್ಲಿರುವ ನಾಲ್ಕು ಕಂಬಗಳು ಚೌಕಕಾರ ವಾಗಿದ್ದು ಸರಳ ಕೆತ್ತನೆಯಿಂದ ಕೂಡಿದೆ. ಈ ದೇವಾಲಯದ ಪ್ರವೇಶಕ್ಕೆ ಸೋಪನಗಳನ್ನು ನಿರ್ಮಿಸಿದ್ದಾರೆ. ಗರ್ಭಗೃಹದ ಮೇಲೆ ಸರಳ ಮಾದರಿಯ ಶಿಖರ ವಿದ್ದು ಕಳಶವನ್ನು ಹೊಂದಿದೆ.

ಸಂಖ್ಯೆ : ೦೭

ಸ್ಮಾರಕ ಹೆಸರು : ಈಶ್ವರ ದೇವಾಲಯ

ಊರು : ಕುಮತಿ

ಸ್ಥಳ : ಗ್ರಾಮದಿಂದ ಒಂದು ಕೀ.ಮಿ.

ಕಾಲ : ೧೯ನೇ ಶತಮಾನ

ಶೈಲಿ : ಪಾಳೆಯಗಾರರ ಶೈಲಿ

ಅಭಿಮುಖ : ಪೂರ್ವ

ಸ್ಥಿತಿ : ಸಾಧರಣ

ಸಂರಕ್ಷಣೆ : –

ಈ ದೇವಾಲಯವು ಕುಮತಿ ಗ್ರಾಮದಿಂದ ಉತ್ತರಕ್ಕೆ ಒಂದು ಕಿ.ಮೀ ದೊರದಲ್ಲಿದ್ದು. ವಲಸೆ ಹಳ್ಳ ಹಾಗೂ ಜನಿಗಿಹಳ್ಳದ ಮಧ್ಯೆದ ದಂಡೆಯ ಮೇಲಿದೆ. ಗರ್ಭಗೃಹ ಹಾಗೂ ಸಭಾಮಂಟಪವನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಕಾಣುತ್ತೇವೆ. ಗರ್ಭಗೃಹದ ಭುವನೇಶ್ವರಿಯು ಸರಳ ಶೈಲಿಯಲ್ಲಿದೆ. ಸಭಾಮಂಟಪದ ಕಂಬಗಳು ನೀಳವಾಗಿವೆ. ಈ

ದೇವಾಲಯದ ಮೇಲು ಛಾವಣಿಯು ಬಂಡೆಗಳಿಂದ ಹೊಂದಿಸಲಾಗಿದೆ. ಗರ್ಭಗೃಹ ಬಾಗಿಲುವಾಡದಲ್ಲಿ ಸೂರ್ಯ, ಚಂದ್ರ ಇದ್ದು ಈ ದೇವಾಲಯದ ಪ್ರವೇಶಕ್ಕೆ ಸೋಪಾನುಗಳನ್ನು ನಿರ್ಮಿಸಿಲಾಗಿದೆ.

ಸಂಖ್ಯೆ : ೦೮

ಸ್ಮಾರಕ ಹೆಸರು : ಕಲ್ಲೇಶ್ವರ ದೇವಾಲಯ ಶೈಲಿ : ವಿಜಯನಗರೋತ್ತರ
ಊರು : ಕಾನಾಹೊಸಹಳ್ಳಿ ಅಭಿಮುಖ : ಪೂರ್ವ
ಸ್ಥಳ : ಗ್ರಾಮದ ಮಧ್ಯ ಸ್ಥಿತಿ : ಉತ್ತಮ
ಕಾಲ : ೧೭-೧೮ ನೇ ಶತಮಾನ ಸಂರಕ್ಷಣೆ : -

ಈ ದೇವಾಲಯವು ಗರ್ಭಗೃಹದಲ್ಲಿ ಶಿವಲಿಂಗವನ್ನು ಕಾಣಬಹುದು. ದೇವಾಲಯದ ಗರ್ಭಗೃಹ ಮಾತ್ರ ಉಳಿದು ಮುಂಭಾಗ ಅಧುನಿಕವಾಗಿ ನಿರ್ಮಾಣ ಮಾಡಲಾಗಿದೆ. ಈ ದೇವಾಸ್ಥಾನದಲ್ಲಿ ಹನ್ನೆರಡು ಅರ್ಧಗಂಬಗಳಿದ್ದು ನಾಲ್ಕು ಪೂರ್ಣ ಕಂಬಗಳಿವೆ. ದೇವಾಲಯವು ಮೂರು ಹಂತಗಳನ್ನ ಒಳಗೊಂಡಿದ್ದು ಗರ್ಭಗೃಹ ಅಂತರಾಳ, ನವರಂಗವನ್ನು ಹೊಂದಿದೆ. ಈ ದೇವಾಲಯದ ಗರ್ಭಗುಡಿಯ ದ್ವಾರಪಟ್ಟಿಕೆಯಲ್ಲಿ ಹೂವಿನ ಅಕೃತಿಯ ಸರಗಳಿಂದ ಶೃಂಗರಿಸಲಾಗಿದೆ.

ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಶಿಲ್ಪವನ್ನು ಕಾಣುತ್ತೆವೆ. ಗರ್ಭಗೃಹದ ದ್ವಾರ ಬಾಗಿಲಿನ ಎರಡು ಕಡೆ ಶೈವ ದ್ವಾರ ಪಾಲಕರ ಉಬ್ಬು ಚಿತ್ರಗಳನ್ನು ಕಾಣುತ್ತೆವೆ. ಗರ್ಭಗೃಹ ಮತ್ತು ಅಂತರಾಳದಲ್ಲಿ ಭುವನೇಶ್ವರಿಯು ಸುಂದರವಾಗಿ ಅಲಂಕೃತಗೊಂಡಿದೆ. ಗರ್ಭಗೃಹದಲ್ಲಿ ಪೂಜ್ಯ ವಸ್ತುಗಳನ್ನ ಹಿಡಲು ಅಟ್ಟಣೀಗೆಯನ್ನು ನಿರ್ಮಿಸಿದ್ದಾರೆ. ಅಂತರಾಳದಲ್ಲಿ ಬಸವಣ್ಣನ ಮೂರ್ತಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗವು ಇತ್ತಿಚಿನ ದಿನಗಳಲ್ಲಿ ನಿರ್ಮಾಣ ಮಾಡಿರುವುದು ಕಂಡು ಬರುತ್ತದೆ. ಈ ದೇವಾಲಯದ ಸುತ್ತ ಪ್ರದಕ್ಷಿಣ ಪಥ ಒಳಗೊಂಡಿದೆ.

ಸಂಖ್ಯೆ : ೦೯

ಸ್ಮಾರಕ ಹೆಸರು : ಕಲ್ಲೇಶ್ವರ ದೇವಾಲಯ ಶೈಲಿ : ಕಲ್ಯಾಣ ಚಾಲುಕ್ಯರು
ಊರು : ಹುಲಿಕೆರೆ ಅಭಿಮುಖ : ಪೂರ್ವ
ಸ್ಥಳ : ಕೆರೆಯ ಹಿಂಭಾಗ ಸ್ಥಿತಿ : ಕನಿಷ್ಠ
ಕಾಲ : ಕ್ರಿ.ಶ. ಸು. ೧೩ನೇ ಶತಮಾನ ಸಂರಕ್ಷಣೆ : ಸ್ಥಳೀಯರು

ಕಾನಾಹೊಸಹಳ್ಳಿ ಹೊಬಳಿ ಕೇಂದ್ರದಿಂದ ದಕ್ಷಿಣಕ್ಕೆ ನಾಲ್ಕು ಕಿ.ಮೀ. ದೂರದಲ್ಲಿರುವ ಹುಲಿಕೆರೆಯ ಕೆರೆಯ ಹಿಂಭಾಗದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ತ್ರೀಕೂಟಾಚಲವಾದ ಕಲ್ಲೇಶ್ವರ ದೇವಾಲಯ ನಿರ್ಮಾಣಗೊಂಡಿದೆ. ಈ ದೇವಾಲಯವು ಅಧಿಷ್ಠಾನವು ತ್ರೀಪಟ್ಟ ಕುಮುದ ಜಗತಿಯ ಮೇಲಿನ ಭಿತ್ತಿಯ ಭಾಗದಲ್ಲಿ ಯಾವುದೇ ಶಿಲ್ಪಗಳು ಕಂಡುಬಂದಿಲ್ಲ. ಕಪೋತ ಭಾಗವು ಮುಂಚಾಚುಕೊಂಡಿದೆ. ಈ ದೇವಾಲಯದಲ್ಲಿ ಮೂರು ಗರ್ಭಗೃಹಗಳು ಅಂತರಾಳಗಳು ಸಭಾಮಂಟಪ ಮತ್ತು ಮುಖಮಂಟಪಗಳಿವೆ. ಪೂರ್ವಕ್ಕೆ ಇರುವ ಮುಖ್ಯ ಗರ್ಭಗೃಹದಲ್ಲಿ ಉದ್ಭವ ಲಿಂಗ ಮತ್ತು ಸಭಾಮಂಟಪದಲ್ಲಿ ನಂದಿ ಶಿಲ್ಪಗಳಿವೆ.

ಪ್ರತಿ ಗರ್ಭಗೃಹದಲ್ಲಿ ನಾಲ್ಕು ಅರೆಕಂಬಗಳು ಹಾಗೂ ನಾಲ್ಕು ಅರೆ ಭೋಧಿಗೆಗಳಿಂದ ಕೂಡಿದೆ. ಅಂತರಾಳವು ಸಹ ನಾಲ್ಕು ಅರೆಗಂಬಗಳು ಮತ್ತು ನಾಲ್ಕು ಅರೆಭೋಧಿಗೆಗಳನ್ನು ಒಳಗೊಂಡಿದೆ. ಸಭಾಮಂಟಪದಲ್ಲಿ ನಾಲ್ಕು ಪೂರ್ಣ ಕಂಬಗಳು ಚಚೌಕಕಾರ ಮತ್ತು ಸುರುಳಿ ಆಕಾರ ಎರಡು ಮಿಶ್ರವಾಗಿವೆ. ಪ್ರತಿಯೊಂದು ಗರ್ಭಗೃಹ ಅಂತರಾಳ ಸಭಾಮಂಟಪದ ಮೇಲ್ಭಾಗದಲ್ಲಿರುವ ಭುವನಶ್ವರಿಯು ಸುಂದರವಾಗಿ ಅಲಂಕೃತಗೊಂಡಿರುವುದು ಕಂಡುಬರುತ್ತದೆ. ಉತ್ತರ ದಿಕ್ಕಿನ ಗರ್ಭಗೃಹದಲ್ಲಿ ವಿಷ್ಣುಶಿಲ್ಪವನ್ನು ಕಾಣಬಹುದು. ಈ ಶಿಲ್ಪವು ಎತ್ತರವಾದ ಪೀಠದ ಮೇಲಿದ್ದು ಎರಡೂವರೆ ಅಡಿ ಎತ್ತರವಿದೆ. ವಿಷ್ಣುವಿನ ಎರಡು ಕೈಗಳಲ್ಲಿ ಶಂಖ ಚಕ್ರ ಉಳಿದ ಎರಡು ಕೈಗಳಲ್ಲಿ ಆಭಯ ಮತ್ತು ವರದ ಮುದ್ರೆಗಳಲ್ಲಿವೆ. ಸಮಭಂಗಿಯಲ್ಲಿ ನಿಂತಿರುವ ವಿಷ್ಣುಶಿಲ್ಪವನ್ನು ಕಪ್ಪುಶಿಲೆಯಲ್ಲಿ ಕೆತ್ತಲಾಗಿದೆ. ದಕ್ಷಿಣದಿಕ್ಕಿನ ಗರ್ಭಗೃಹದಲ್ಲಿ ಭೈರವನ ಶಿಲ್ಪವಿದೆ. ಭೈರವನ ಕೈಯಲ್ಲಿ ತ್ರೀಶೂಲ ಖಡ್ಗ, ಡಮರು ಮತ್ತು ಯೋಧನ ತಲೆಯಿದೆ. ತಲೆಯಿಂದ ಹೊರಸೊಸುವ ರಕ್ತವನ್ನು ಹಿರಲು ನಾಯಿ ಹಾತೊರಿಯುತ್ತದೆ.[೧೦]

ಈ ದೇವಾಲಯದ ಮೇಲಿನ ಭಾಗದಲ್ಲಿ ಸುತ್ತ ಕೈಪೀಡಿ ಗೊಡೆಯನ್ನು ಕಾಣುತ್ತೇವೆ. ಮೂರು ಗರ್ಭಗೃಹಗಳ ಮೇಲ್ಭಾಗದಲ್ಲಿ ಶಿಖರಗಳಿದ್ದು ತಾಮ್ರದ ಕಳಶಗಳು ಆಕರ್ಷಕವಾಗಿವೆ. ಮೇಲ್ಭಾಗದ ನಾಲ್ಕು ದಿಕ್ಕುಗಳಲ್ಲಿ ನಂದಿಯ ಗಾರೆ ಶಿಲ್ಪಗಳು ಇತ್ತೀಚಿಗೆ ನಿರ್ಮಾಣ ಮಾಡಿಕೊಂಡಿರುವುದು ಕಂಡುಬಂದಿದೆ. ಕಣಶಿಲೆಯಲ್ಲಿ ನಿರ್ಮಿಸಿಲಾದ ಈ ದೇವಾಲಯ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಟ್ಟಲಾಗಿದೆ.

ಸಂಖ್ಯೆ : ೧೦

ಸ್ಮಾರಕ ಹೆಸರು : ಕಲ್ಲೇಶ್ವರ ದೇವಾಲಯ ಶೈಲಿ : ಕಲ್ಯಾಣ ಚಾಲುಕ್ಯರು

ಊರು : ತೊರೆ ಕಲ್ಲಹಳ್ಳಿ ಅಭಿಮುಖ : ಪೂರ್ವ

ಸ್ಥಳ : ಗ್ರಾಮದ ಪೂರ್ವಕ್ಕೆ ಅಭಿಮುಖ : ಪೂರ್ವ

ಕಾಲ : ಕ್ರಿ.ಶ. ಸು. ೧೨ನೇ ಶತಮಾನ ಸ್ಥಿತಿ : ಸಾಧಾರಣ

ಈ ದೇವಾಲಯವು ಕಾನಾಹೊಸಹಳ್ಳಿ ಕೇಂದ್ರದಿಂದ ೧೩ ಕಿ.ಮೀ. ದೂರದಲ್ಲಿರುವ ಗಡಿಗ್ರಾಮ ತೊರೆ ಕಲ್ಲಹಳ್ಳಿಯಲ್ಲಿದೆ. ಧಿವಂಗತ ಹಾಲೂರು ಶ್ರೀನಿವಾಸ ಜೋಯಿಸರು ಹೇಳುವಾಗೆ ಪಾಪವಿನಾಶನಿ ಅಥವಾ ಬಡನದಿಯೆಂದು ಕರೆಯುವ ಚಿನ್ನಹಗರಿಯ ಎಡದಂಡೆಯ ಮೇಲಿರುವ ಕಲ್ಲೇಶ್ವರ ದೇವಾಲಯವು ಬಹಳ ಪ್ರಸಿದ್ಧಿಯಾಗಿದೆ. ಈ ದೇವಾಲಯವನ್ನು ಕಣ ಶಿಲೆಯಿಂದ ಕಟ್ಟಿದ್ದು. ಇದರಲ್ಲಿ ಗರ್ಭಗೃಹ ಅಂತರಾಳ ಸಭಾಮಂಟಪಗಳಿವೆ. ಗರ್ಭಗೃಹದಲ್ಲಿ ಕಪ್ಪುಶಿಲೆಯ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.

ಗರ್ಭಗೃಹದ ಭಿತ್ತಿಯ ಭಾಗದಲ್ಲಿ ಪೂಜೆ ಪರಿಕರಗಳನ್ನು ಹಿಡಲು ಅಟ್ಟಣೀಗೆಯನ್ನು ನಿರ್ಮಿಸಿರುವುದು ಕಲ್ಯಾಣ ಚಾಲುಕ್ಯರ ಮತ್ತೊಂದು ಲಕ್ಷಣವಾಗಿದೆ. ಗರ್ಭಗೃಹದ ಬಾಗಿಲುವಾಡದಲ್ಲಿರುವ ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಶಿಲ್ಪವನ್ನು ಕಾಣುತ್ತೇವೆ. ಅಂತರಾಳಕ್ಕೆ ಅಭಿಮುಖವಾಗಿ ಸಭಾಮಂಟಪದಲ್ಲಿರುವ ನಂದಿಶಿಲ್ಪವು ಕಪ್ಪುಶಿಲೆಯಿಂದ ಕೂಡಿದೆ. ಸಭಾಮಂಟಪದ ಮಧ್ಯದಲ್ಲಿ ಇರುವ ನಾಲ್ಕು ಕಂಬಗಳ ಎತ್ತರ ಸ್ವಲ್ಪ ಕಡಿಮೆಯಿದ್ದು ಚಚೌಕ ಮತ್ತು ಅಷ್ಟಮುಖಗಳಲ್ಲಿ ಕೆತ್ತಲಾಗಿದೆ. ಗರ್ಭಗೃಹ ಅಂತರಾಳ ಸಭಾಮಂಟಪದ ಭುವನಶ್ವರಿಯು ಸರಳ ರೂಪದಲ್ಲಿ ಕೆತ್ತಲಾಗಿದೆ. ಸಭಾಮಂಟಪದ ಸುತ್ತ ಇದ್ದ ಗೊಡೆ ಹಾಳಾಗಿದ್ದು ಕಂಬಗಳು ಮಾತ್ರ ನಿಂತಿವೆ. ಅದರೆ ಇತ್ತೀಚಿಗೆ ಹಾಳಾದ ಭಿತ್ತಿಯ ಭಾಗವನ್ನು ಇಟ್ಟಿಗೆಗಳಿಂದ ನಿರ್ಮಿಸಿರುವುದು ಕಂಡುಬಂದಿವೆ. ಈ ಕಂಬಗಳಲ್ಲಿ ಯಾವುದೇ ರೀತಿಯಾದ ಅಲಂಕರಣೆ ಕಂಡುಬಂದಿಲ್ಲ.

ಈ ದೇಗುಲದ ಕಂಬ ಮತ್ತು ಶಿವಲಿಂಗ ಮುಂತಾದ ಲಕ್ಷಣಗಳಿಂದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಹೇಳಬಹುದು. ಹಾಗೂ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳು ನದಿ, ಕೆರೆ, ಹಳ್ಳ, ದಂಡೆಯ ಮೇಲೆ ಹೆಚ್ಚಾಗಿ ನಿರ್ಮಿಸಿರುವುದು ಕಾಣುತ್ತೇವೆ. ಈ ದೇವಾಲಯದ ಸುತ್ತಮುತ್ತಲಿನ ಪ್ರದೇಶದಲ್ಲಿ ಕಪ್ಪು ಮತ್ತು ಕೆಂಪು ಮಡಿಕೆ ಚೂರುಗಳು

ಸಾಕಷ್ಟು ಪ್ರಮಾಣದಲ್ಲಿ ದೊರೆತಿವೆ. ದೇವಾಸ್ಥಾನದ ಕಾರ್ಯಗಳಿಗೆ ಚಿನ್ನಹಗರಿ ನದಿಯ ನೀರನ್ನು ಸ್ಥಳೀಯರು ಬಳಸಿರುವುದು ಕಾಣಬಹುದು.

ಸಂಖ್ಯೆ : ೧೧

ಸ್ಮಾರಕ ಹೆಸರು : ಕಲ್ಲೇಶ್ವರ ದೇವಾಲಯ
ಶೈಲಿ : ಕಲ್ಯಾಣ ಚಾಲುಕ್ಯರು
ಊರು : ಪೂಜಾರಹಳ್ಳಿ
ಅಭಿಮುಖ : ಪೂರ್ವ
ಸ್ಥಳ : ಗ್ರಾಮದ ವಾಯುವ್ಯಕ್ಕೆ
ಸ್ಥಿತಿ : ಕನಿಷ್ಠ
ಕಾಲ : ಕ್ರಿ.ಶ. ಸು. ೧೩ನೇ ಶತಮಾನ
ಸಂರಕ್ಷಣೆ :

ಈ ದೇವಾಲಯವು ಪೂಜಾರಹಳ್ಳಿಯಿಂದ ಲೋಕಿಕೆರೆಗೆ ಹೋಗುವ ಮಾರ್ಗವಾಗಿ ಮಟ್ಟಿ ಹತ್ತಿರ ಪಾಲಯ್ಯನವರ ಪಟ್ಟಾ ಜಮೀನಿನಲ್ಲಿ ಕಲ್ಲೇಶ್ವರ ದೇವಾಲಯವು ಸಂಪೂರ್ಣವಾಗಿ ಹಾಳಾಗಿದ್ದು ಶಿಲ್ಪಗಳು ಮಾತ್ರ ಉಳಿದಿವೆ. ಗರ್ಭಗೃಹದಲ್ಲಿ ಶಿವಲಿಂಗ ಮತ್ತು ಸಭಾಮಂಟಪದಲ್ಲಿ ನಂದಿಶಿಲ್ಪಗಳಿವೆ. ಈ ದೇವಾಲಯವನ್ನು ಕಣಶಿಲೆ ಬಳಸಿ ಕಟ್ಟಲಾಗಿದೆ. ಈ ದೇವಾಲಯದ ಸುತ್ತಮುತ್ತ ಕಪ್ಪು ಮಡಿಕೆಚೂರುಗಳು ಸಿಗುತ್ತವೆ. ಹಾಗೂ ಈ ದೇವಾಲಯದಿಂದ ಸುಮಾರು ಐವತ್ತು ಅಡಿ ದೂರದಲ್ಲಿ ಲೋಕಿಕೆರೆಯನ್ನು ಕಾಣಬಹುದು. ಈ ಕೆರೆಯ ದಂಡೆಯಲ್ಲಿ ಮೂರು ಸಾಲುಗಳ ಒಂದು ಶಾಸನದಲ್ಲಿ ಶ್ರೀ ರತ್ನಭೂಷಣ ಭಟಾರರ ಪ್ರಿಯಶಿಷ್ಯನ ಉಲ್ಲೇಖವಿದೆ.

ಸಂಖ್ಯೆ : ೧೨

ಸ್ಮಾರಕ ಹೆಸರು : ಚೌಡೇಶ್ವರಿ ದೇವಾಲಯ
ಶೈಲಿ : ಆಧುನಿಕ
ಊರು : ಹಾರಕಬಾವಿ
ಅಭಿಮುಖ : ಪೂರ್ವ
ಸ್ಥಳ : ಗ್ರಾಮದ ವಾಯುವ್ಯಕ್ಕೆ
ಕಾಲ : ಕ್ರಿ. ಶ. ಸು. ೧೮ನೇ ಶತಮಾನ
ಸ್ಥಿತಿ : ಉತ್ತಮ
ಸಂರಕ್ಷಣೆ : ಸ್ಥಳಿಯರು

ಈ ದೇವಾಲಯವು ಕಾನಾಹೊಸಹಳ್ಳಿ ಹೋಬಳಿ ಕೇಂದದಿಂದ ಉತ್ತರಕ್ಕೆ ೧೫. ಕಿ.ಮೀ.ದೂರದಲ್ಲಿರುವ ಹಾರಕಬಾವಿ ಗ್ರಾಮದ ಚೌಡೇಶ್ವರಿ ದೇವಿಯು ಪ್ರಸಿದ್ಧವಾಗಿದ್ದಾಳೆ, ಈ ದೇವಾಲಯವು ಗರ್ಭಗೃಹದಲ್ಲಿ ಚೌಡೇಶ್ವರಿ (ಭೈರವಿ)ಯ ಮೂರು ಅಡಿ ಎತ್ತರದ ಕಪ್ಪುಶಿಲೆಯ ಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡದಲ್ಲಿ ಹೂಬಳ್ಳಿಗಳಿಂದ ಕೂಡಿರುವ ಲೋಹದ ಪಟ್ಟಿಕೆಗಳನ್ನು ಕಾಣುತ್ತೇವೆ. ಗರ್ಭಗೃಹದಲ್ಲಿ ನಾಲ್ಕು ಅರೆಕಂಬಗಳು ಹಾಗೂ ಅರೆಭೋಧಿಗೆಗಳನ್ನೂ

ಹೊಂದಿದೆ. ಸಭಾಮಂಟಪದಲ್ಲಿರುವ ನಾಲ್ಕು ಚಚೌಕವಾಗಿದೆ. ಸಭಾಮಂಟಪದ ಭುವನೇಶ್ವರಿಯು ಸರಳವಾಗಿದೆ.

ಸಭಾಮಂಟಪದ ಮುಂದೆ ಸ್ತ್ರೀಭಾರ ತ್ರಿಶೂಲವುಳ್ಳ ಕಂಬವುಳ್ಳ ಮಂಟಪವನ್ನು ಹೊಂದಿದೆ. ಗರ್ಭಗೃಹ ಮೇಲೆ ದ್ರಾವಿಡ ಮಾದರಿಯ ಎರಡು ತಲಗಳುಳ್ಳ ಶಿಖರವಿದ್ದು ಇದಕ್ಕೆ ಗಾರೆ ಮತ್ತು ಇಟ್ಟಿಗೆಗಳನ್ನು ಬಳಸಲಾಗಿದೆ. ಇದರಲ್ಲಿ ಕೀರ್ತಿಮುಖ ವಿವಿಧ ದೇವತೆಗಳ ಶಿಲ್ಪಗಳನ್ನು ಚಿತ್ರಿಸಲಾಗಿದೆ, ಶಿಖರದ ತುದಿಯಲ್ಲಿ ಲೋಹದ ಕಳಶವಿದೆ. ಈ ದೇವಾಲಯದ ಲಕ್ಷಣಗಳು ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣ ವಾದುದನ್ನು ಪುಷ್ಟಿ ನೀಡುತ್ತದೆ.

ಈ ದೇವಾಲಯದ ಮುಂಭಾಗದಲ್ಲಿ ಇತ್ತೀಚಿಗೆ ಸುಂದರವಾದಂತಹ ಗೋಪುರವನ್ನು ನಿರ್ಮಿಸಿಲಾಗಿದೆ. ಈ ಗೋಪುರದ ಬಲಬದಿಯಲ್ಲಿ ಶಾಸನ ಒಂದು ಕಂಡುಬರುತ್ತದೆ. ಈ ಗೋಪುರದ ಮುಂದೆ ೩೦.ಅಡಿ ಎತ್ತರದ ದ್ವೀಪಸ್ತಂಭವನ್ನು ಹಾಗೂ ಪ್ರವೇಶದ್ವಾರವನ್ನು ಕಾಣಬಹುದು. ಈ ದೇವಾಲಯದ ಸುತ್ತಲೂ ಪ್ರದಕ್ಷಿಣಪಥಕ್ಕೆ ವಿಶಾಲವಾದ ಜಾಗವನ್ನು ಒಳಗೊಂಡಿದೆ.

ಸಂಖ್ಯೆ : ೧೩

ಸ್ಮಾರಕ ಹೆಸರು : ಚೌಡೇಶ್ವರಿ ದೇವಾಲಯ

ಊರು : ಹೂಡೇಂ

ಸ್ಥಳ : ಸಂತೆ ಬಜಾರು

ಕಾಲ : ಆಧುನಿಕ

ಶೈಲಿ : ಆಧುನಿಕ

ಅಭಿಮುಖ : ಪೂರ್ವ

ಸ್ಥಿತಿ : ಸಾಧಾರಣ

ಸಂರಕ್ಷಣೆ : ಸ್ಥಳಿಯರು

ಈ ದೇವಾಲಯವು ಹೊಡೇಂ ಗ್ರಾಮದಿಂದ ತಾಯಕನಹಳ್ಳಿಗೆ ಹೋಗುವ ರಸ್ತೆ ಮಾರ್ಗದಲ್ಲಿನ ಸಂತೆ ಬಜಾರ ಪಕ್ಕದಲ್ಲಿ ನಿರ್ಮಾಣವಾಗಿದೆ. ಈ ದೇವಾಲಯವು ಎತ್ತರದ ಜಗತಿಯ ಮೇಲೆ ಚಿಕ್ಕ ಗರ್ಭಗುಡಿಯಿದೆ. ಗರ್ಭಗುಡಿಯಲ್ಲಿ ಚೌಡಮ್ಮ ದೇವತೆಯನ್ನು ಕಾಣುತ್ತೆವೆ. ಭುವನೇಶ್ವರಿಯು ಸರಳವಾಗಿ ಅಲಕೃತವಾಗಿದೆ. ಗರ್ಭಗೃಹದ ಮೇಲೆ ಗುಮ್ಮಟಾಕಾರದ ಶಿಖರವಿದೆ.

ಐತಿಹ್ಯ:

ಚೌಡಮ್ಮನ ಮೂಲ ತುಂಬ ವಿಚಿತ್ರವಾಗಿದೆ. ಈಕೆಯ ಮೂಲದ ಬಗ್ಗೆ ಜನಪದರು ಒಂದು ರೀತಿಯಿಂದ ಹೇಳಿದರೆ ಪಂಡಿತರು ಇನ್ನೊಂದು ರೀತಿಯಲ್ಲಿ ಹೇಳುತ್ತಾರೆ. ಏಳುಕೊಳ್ಳದಲ್ಲಿ ಮುಳುಗಿದ್ದ ಎಲ್ಲಮ್ಮ ಮೇಲೆಳಲಿಲ್ಲವಂತೆ ಯಾವುದೇ ವಾದ್ಯ ತೆಗೆದುಕೊಂಡು ಬಾರಿಸಿದಾಗಲೂ ಮೇಲೆ ಬರಲಿಲ್ಲವಂತೆ ಚೌಡಿಕೆ ವಾದ್ಯ ತೆಗೆದುಕೊಂಡು ಬಾರಿಸಿದಾಗ ಈ ವಾದ್ಯನಾದಕ್ಕೆ ಸಂಪ್ರಿತಳಾಗಿ ಎಲ್ಲಮ್ಮ ಮುಳುಗಿದಾಗ ಮೇಲೆದು ಬಂದಳಂತೆ ಅದಕ್ಕಾಗಿ ಎಲ್ಲಮ್ಮನಿಗೆ ಚೌಡಿಕೆಯಿಂದ ಚೌಡಮ್ಮನೆಂಬ ಇನ್ನೊಂದು ಹೆಸರು ಬಂತೆಂದು ಹೇಳುತ್ತಾರೆ. ಹಾವಿನ ಪೂಜೆಯಿಂದ ನಾಗದೇವತೆ ಹುಟ್ಟಿಕೊಂಡಂತೆ ಚೋಳಿನ ಪೂಜೆಯಿಂದ ಚೋಳಮ್ಮ ಚೌಳಮ್ಮ>ಚೌಡಮ್ಮ ಹುಟ್ಟಿಕೊಂಡಳು ಎಂಬ ಐತಿಹ್ಯವಿದೆ.

ಸಂಖ್ಯೆ : ೧೪

ಸ್ಮಾರಕ ಹೆಸರು : ಬಸವಣ್ಣ ದೇವಾಲಯ

ಶೈಲಿ : ಪಾಳೆಯಗಾರರು

ಊರು : ಕಾನಾಹೊಸಹಳ್ಳಿ

ಅಭಿಮುಖ : ಉತ್ತರಾಭಿಮುಖ

ಸ್ಥಳ : ಕೆರೆಯ ಹಿಂಭಾಗ

ಸ್ಥಿತಿ : ಸಾಧಾರಣ

ಕಾಲ : ೧೯ನೇ ಶತಮಾನ

ಸಂರಕ್ಷಣೆ : ಸ್ಥಳಿಯರು

ಈ ದೇವಾಲಯವು ಕಾನಾಹೊಸಹಳ್ಳಿ ಗ್ರಾಮದ ಕೆರೆಯ ಹಿಂಭಾಗದಲ್ಲಿ ನಿರ್ಮಿಸಲಾಗಿದೆ. ಈ ದೇವಾಲಯವು ಉತ್ತರಾಭಿಮುಖವಾಗಿ ನಿರ್ಮಾಣಗೊಂಡಿದೆ. ಅಲ್ಲದೇ ಈ ದೇವಾಲಯದ ವಿಸ್ತೀರ್ಣವು ಅಗಲ ೮.೨, ಅಡಿ, ಉದ್ದ ೮,೨ ಅಡಿ ಒಳಗೊಂಡು ಚಚೌಕಕಾರವಾಗಿದೆ. ಈ ದೇವಾಲಯವನ್ನು ಸ್ಥಳೀಯವಾಗಿ ದೊರೆಯುವ ಕಲ್ಲು ಬಂಡೆಗಳಿಂದ ನಿರ್ಮಾಣವಾಗಿ ಯಾವುದೇ ಕಂಬಗಳು ಕಂಡು ಬರುವುದಿಲ್ಲ, ಹಾಗೂ ದೇವಾಲಯದ ಒಳಗಡೆ ಬಸವಣ್ಣನ ಮೂರ್ತಿ ಇದೆ. ಮತ್ತು ದೇವಾಲಯದ ಭಿತ್ತಿ ಭಾಗದಲ್ಲಿ ಮತ್ಸ್ಯ, ಹಾವುಗಳ, ಉಬ್ಬುಶಿಲ್ಪಗಳು ಕಂಡುಬರುತ್ತೆವೆ, ಸ್ಥಳಿಯರು ಹಾಗೂ ಸುತ್ತಮುತ್ತಲಿನ ಹೊಲದವರು ವಿಶೇಷ ಸಂದರ್ಭಗಳಲ್ಲಿ ಪೂಜೆ ಸಲ್ಲಿಸುತ್ತಾರೆ.

ಸಂಖ್ಯೆ : ೧೫

ಸ್ಮಾರಕ ಹೆಸರು : ಬಸವೇಶ್ವರ ದೇವಾಲಯ

ಸ್ಥಳ : ಗ್ರಾಮದ ವಾಯುವ್ಯಕ್ಕೆ

ಊರು : ಪೂಜಾರಹಳ್ಳಿ

ಕಾಲ : ೧೯ನೇ ಶತಮಾನ

ಶೈಲಿ : ವಿಜಯನಗರೋತ್ತರ
ಸ್ಥಿತಿ : ಮಧ್ಯಮ
ಅಭಿಮುಖ : ಪಶ್ಚಿಮ
ಸಂರಕ್ಷಣೆ : ಸ್ಥಳಿಯರು

ಕಾನಾಹೊಸಹಳ್ಳಿ ಹೋಬಳಿ ಕೇಂದ್ರದಿಂದ ಪೂವಕ್ಕೆ ಒಂಭತ್ತು ಕಿ.ಮೀ. ದೂರದಲ್ಲಿರುವ ಪೂಜಾರಹಳ್ಳಿಯ ಗ್ರಾಮದ ಬಸವೇಶ್ವರ ದೇವಾಲಯವನ್ನು ಕಾಣಬಹುದು. ಈ ದೇವಾಲಯವು ಗರ್ಭಗೃಹ, ಸಭಾಮಂಟಪ ಹಾಗೂ ಇತ್ತೀಚಿಗೆ ವಿಸ್ತಾರಗೊಂಡ ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಒಂದೊವರೆ ಅಡಿ ಎತ್ತರದ ನಂದಿಶಿಲ್ಪವಿದೆ. ಸಭಾಮಂಟಪದ ಕಂಬಗಳು ಸರಳ ಶೈಲಿಯಲ್ಲಿದ್ದು ಚಚೌಕವಾಗಿದೆ. ಮುಖಮಂಟಪಕ್ಕೆ ಕೆಂಪು ಹಂಚುಗಳನ್ನು ಹೊಂದಿಸಲಾಗಿದೆ. ಗರ್ಭಗೃಹದ ಮೇಲಿರುವ ಸ್ಥಳೀಯ ಶಿಖರದಲ್ಲಿದೆ. ಶಿವ-ಪಾರ್ವತಿ, ನಂದಿ ಮತ್ತಿತರ ಗಾರೆಶಿಲ್ಪಗಳನ್ನು ಮಾಡಿಸಿ ಅಳವಡಿಸಲಾಗಿದೆ. ದೇವಾಲಯದ ಬಲಬದಿಯ ಗುಡ್ಡದ ಮೇಲೆ ಪಾಳೆಗಾರರ ಕಾಲದ ಕೋಟೆಯ ಅವಶೇಷಗಳಿವೆ, ಹಾಗೂ ದೇಗುಲದ ಲಕ್ಷಣಗಳಿಂದ ಪಾಳೆಯಗಾರರು ತಮ್ಮ ಅವಧಿಯಲ್ಲಿ ಕಟ್ಟಿಸಿದ್ದಾರೆಂಬುದು ಸ್ಪಷ್ಟವಾಗುತ್ತದೆ.

ಸಂಖ್ಯೆ : ೧೬

ಸ್ಮಾರಕ ಹೆಸರು : ಬಸವಣ್ಣ ದೇವಾಲಯ
ಶೈಲಿ : ವಿಜಯನಗರೋತ್ತರ
ಊರು : ಕನ್ನಿಬೋರಯ್ಯನಹಟ್ಟಿ
ಅಭಿಮುಖ : ಉತ್ತರ
ಸ್ಥಳ : ಗ್ರಾಮದ ಒಳಗೆ
ಸ್ಥಿತಿ : ಸಾಧಾರಣ
ಕಾಲ : ೧೭-೧೮ನೇ ಶತಮಾನ
ಸಂರಕ್ಷಣೆ : ಸ್ಥಳಿಯರು

ಈ ದೇವಾಲಯವು ಕಾನಾಹೊಸಹಳ್ಳಿ ಹೋಬಳಿ ವ್ಯಾಪ್ತಿಯಲ್ಲಿ ಬರುವ ಕನ್ನಿಬೋರಯ್ಯನಹಟ್ಟಿಯ ಗ್ರಾಮದಲ್ಲಿದೆ. ಈ ಗ್ರಾಮದ ಪ್ರಧಾನ ದೇವರು ಬಸವಣ್ಣನಾಗಿದ್ದು. ಗರ್ಭಗೃಹದಲ್ಲಿ ಕಪ್ಪುಶಿಲೆಯ ನಂದಿಶಿಲ್ಪ ಈ ದೇವಾಲಯದಲ್ಲಿ ಹನ್ನೆರೆಡು ಅರೆಗಂಬಗಳು ನಾಲ್ಕು ಮಾತ್ರ ಪೂರ್ಣಕಂಬಗಳನ್ನು ಒಳಗೊಂಡಿದೆ. ಕಂಬಗಳಲ್ಲಿ ಯಾವುದೇ ಅಲಂಕಾರವಾಗಿ ಕೆತ್ತಿಲ್ಲ ಸರಳಶೈಲಿಯಲ್ಲಿವೆ. ಗರ್ಭಗೃಹದ ಬಾಗಿಲುವಾಡವು ಲೋಹದ ಪಟ್ಟಿಕೆಯಿಂದ ಕೂಡಿದೆ. ಗರ್ಭಗೃಹಕ್ಕೆ ಹೊಂದಿಕೊಂಡಿರುವ ಅಂತರಾಳದ ಬಲಭಾಗದ ಕಂಬದಲ್ಲಿ ಶಿವಲಿಂಗವನ್ನು ಅದೇ ರೀತಿ ಎಡಭಾಗದಲ್ಲಿ ನಂದಿಶಿಲ್ಪವನ್ನು ಕೆತ್ತಿದ್ದಾರೆ, ಮುಖಂಟಪ ಸರಳವಾಗಿದ್ದು ಪ್ರದಕ್ಷಣೆ ಪಥಕ್ಕೆ ವಿಶಾಲವಾದ ಜಾಗವಿರುವುದು ಹಾಗೂ ದೇವಾಲಯದ ಸುತ್ತಲೂ ಪ್ರಕಾರ ಗೋಡೆ ಇದೆ, ಕೆ,ಬಿ,ಹಟ್ಟಿಯಲ್ಲಿನ ಸ್ಥಳಿಯರು ಪ್ರತಿ ಸೋಮವಾರದಂದು ವಿಶೇಷ ಪೂಜೆ, ಪುನಸ್ಕಾರ ಆಚರಣೆಗಳನ್ನು ನಡೆಸುವುದು ಸ್ಥಳಿಯರು ತಿಳಿಸಿದ್ದಾರೆ.

ಸಂಖ್ಯೆ : ೧೭

ಸ್ಮಾರಕ ಹೆಸರು : ಬಸವೇಶ್ವರ ದೇವಾಲಯ
ಊರು : ರಂಗನಾಥಹಳ್ಳಿ
ಸ್ಥಳ : ಗ್ರಾಮದ ಒಳಗೆ
ಕಾಲ : ೨೦ನೇ ಶತಮಾನ
ಶೈಲಿ : ಆಧುನಿಕ
ಅಭಿಮುಖ : ಪೂರ್ವ
ಸ್ಥಿತಿ : ಸಾಧಾರಣ
ಸಂರಕ್ಷಣೆ : ಸ್ಥಳಿಯರು

ಈ ದೇವಾಲಯವು ಗರ್ಭಗೃಹ, ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಕಪ್ಪುಶಿಲೆಯಿಂದ ನಿರ್ಮಾಣಗೊಂಡು ಶಿವಲಿಂಗವಿದ್ದು ಇದೇ ಗರ್ಭಗೃಹದಲ್ಲಿ ಶಿವಲಿಂಗಕ್ಕೆ ಅಭಿಮುಖವಾಗಿ ನಂದಿಶಿಲ್ಪವು ಸಹ ಕಪ್ಪುಶಿಲೆಯಿಂದ ಕೂಡಿದೆ. ಸಭಾಮಂಟಪದ ಕಂಬಗಳು ಚೌಕಕಾರವಾಗಿದ್ದು ಈ ದೇವಾಲಯದ ಪ್ರವೇಶಕ್ಕೆ ಸೋಪಾನಗಳನ್ನ ನಿರ್ಮಿಸಿಕೊಂಡಿದ್ದಾರೆ. ದೇವಾಲಯದ ಕಪೋತ ಭಾಗವು ಮುಂದೆ ಚಾಚುಕೊಂಡಿದೆ. ಗರ್ಭಗೃಹದ ಮೇಲೆ ಶಿಖರವಿದ್ದು ನಾಲ್ಕು ತಲಗಳಿಂದ ಕೂಡಿದೆ. ಕಳಶವು ಸಹ ಆಕರ್ಷಕವಾಗಿದೆ. ದೇವಾಲಯದ ಮೇಲ್ಭಾಗದಲ್ಲಿ ನಾಲ್ಕು ದಿಕ್ಕುಗಳಲ್ಲಿ ನಂದಿಯ ಗಾರೆಶಿಲ್ಪಗಳನ್ನು ಕಾಣಬಹುದು.

ಸಂಖ್ಯೆ : ೧೮

ಸ್ಮಾರಕ ಹೆಸರು : ಬಸವೇಶ್ವರ ದೇವಾಲಯ
ಊರು : ಬಯಲು ತುಂಬರಗುದ್ದಿ
ಸ್ಥಳ : ನಿಂಬಳಗೇರೆಗೆ ಹೋಗುವ ರಸ್ತೆಯಲ್ಲಿ
ಕಾಲ : ಕ್ರಿ.ಶ.೧೭ನೇ ಶತಮಾನ
ಶೈಲಿ : ವಿಜಯನಗರೋತ್ತರ
ಅಭಿಮುಖ : ಉತ್ತರ
ಸ್ಥಿತಿ : ಉತ್ತಮ
ಸಂರಕ್ಷಣೆ : ಸ್ಥಳಿಯರು

ಕಾನಾಹೊಸಹಳ್ಳಿಯಿಂದ ಏಂಟು ಕಿ.ಮೀ ದೂರದಲ್ಲಿರುವ ಪಶ್ಚಿಮ ದಿಕ್ಕಿಗೆ ಇರುವ ಬಯಲು ತುಂಬರಗುದ್ದಿ ಗ್ರಾಮದಲ್ಲಿ ಈ ದೇವಾಲಯವನ್ನು ಕಾಣುತ್ತೇವೆ. ಈ ದೇವಾಲಯವು ಗರ್ಭಗೃಹ, ಸಭಾಮಂಟಪ, ಹೊಂದಿದ್ದು ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಕಪ್ಪುಶಿಲೆಯ ಶಿವಲಿಂಗ ಇರುವುದು ಗರ್ಭಗೃಹಕ್ಕೆ ಅಭಿಮುಖವಾಗಿ ಸಭಾಮಂಟಪದಲ್ಲಿ ನಂದಿಶಿಲ್ಪ ಇರುವುದು. ಸಭಾಮಂಟಪ ಕಂಬಗಳ ಚಚೌಕವಾಗಿದೆ. ದೇವಾಲಯದ ಸುತ್ತಲೂ ಕಪೊತವು ಮುಚಾಚಿಕೊಂಡಿದೆ ದೇವಾಲಯದ ಪ್ರವೇಶಕ್ಕೆ ಸೋಪಾನಗಳು ಹೊಂದಿದ್ದು ಅಕ್ಕಪಕ್ಕದಲ್ಲಿ ಗಾರೆಯಿಂದ ಮಾಡಿರುವ ಗಜಗಳ ಪ್ರೇಕ್ಷಕರನ್ನು ಆಕರ್ಷಿಸುತ್ತವೆ. ಈ ದೇವಾಲಯದ

ಮೇಲೆ ಕೈಪಿಡಿಗೋಡೆ ಇದ್ದು. ನಾಲ್ಕು ಮೂರ್ತಿಯಲ್ಲಿ ನಂದಿಯ ಗಾರೆಶಿಲ್ಪಗಳನ್ನು ಕಾಣುತ್ತೇವೆ. ಗರ್ಭಗೃಹದ ಮೇಲಿನ ಶಿಖರವು ಸುಂದರವಾಗಿದ್ದು ತುದಿಯಲ್ಲಿ ಕಳಶವನ್ನು ಇರಿಸಲಾಗಿದೆ, ಈ ದೇವಾಲಯದ ಮುಂಭಾಗದಲ್ಲಿ ದ್ವೀಪ ಸ್ತಂಭ ಇರುವುದು.

ಸಂಖ್ಯೆ : ೧೯

ಸ್ಮಾರಕ ಹೆಸರು: ಬೀರಲಿಂಗೇಶ್ವರ ದೇವಾಲಯ

ಊರು : ಕಾನಾಹೊಸಹಳ್ಳಿ

ಸ್ಥಳ : ಊರಿನ ಹೊರವಲಯದಲ್ಲಿ ಪೂವಕ್ಕೆ

ಕಾಲ : ೧೯ನೇ ಶತಮಾನ

ಶೈಲಿ : ಪಾಳೆಯಗಾರರು

ಅಭಿಮುಖ : ಪೂರ್ವ

ಸ್ಥಿತಿ : ಸಾಧಾರಣ

ಸಂರಕ್ಷಣೆ : ಸ್ಥಳಿಯರು

ಈ ದೇವಾಲಯವು ಕಾನಾಹೊಸಹಳ್ಳಿ ಗ್ರಾಮದಿಂದ ರಾಷ್ಟೀಯ ಹೆದ್ದಾರಿ ದಾಟಿ ಹೋಗುವ ಮಾರ್ಗವಾಗಿ ಪೂರ್ವಕ್ಕೆ ಇರುವಂತಹ ಜಮೀನಿನಲ್ಲಿದೆ. ಈ ದೇವಾಸ್ಥಾನಕ್ಕೆ ಗರ್ಭಗೃಹ, ಪ್ರಾಂಗಣವಿದ್ದು, ಸ್ಥಳೀಯವಾಗಿ ದೊರೆಯುವ ಚಪ್ಪಡಿ ಕಲ್ಲುಗಳನ್ನು ಬಳಸಿಕೊಂಡು ಈ ದೇವಾಲಯ ನಿರ್ಮಿಸಿದ್ದಾರೆ, ಗರ್ಭಗೃಹದಲ್ಲಿ ನಾಲ್ಕು ಕಲ್ಲಿನ ಕಂಬಗಳು ಇದ್ದು ಯಾವುದೇ ಮೂರ್ತಿ ಪ್ರತಿಷ್ಠಪಿಸಿಲ್ಲ ನಾನು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಪ್ರಾಂಗಣ ಗೋಡೆಯ ಬಿದ್ದು ಹಾಳಾಗಿರುವುದು ಕಂಡು ಬಂದಿದೆ.

ಈ ದೇವಾಲಯದ ಬಗ್ಗೆ ಸ್ಥಳಿಯರು ಹೇಳುವಂತೆ ಮೂಲತ ಕೆಲವು ಸಮುದಾಯದವರು ಒಕ್ಕಲಿದ್ದು ಇಲ್ಲಿ ದಟ್ಟವಾದ ಅರಣ್ಯ ಇದ್ದ ಕಾರಣ ಇದರಲ್ಲಿ ಉಳಿದುಕೊಂಡು ಈ ದೇವಸ್ಥಾನವನ್ನು ನಿರ್ಮಿಸಿಕೊಂಡಿರುವುದು ತಿಳಿದು ಬರುತ್ತದೆ. ಪ್ರಮುಖವಾಗಿ ಇಲ್ಲಿ ಅಂದಿನಿಂದ ಪ್ರಸ್ತುತದವರೆಗೂ ಪ್ರತಿ ವರ್ಷ ಕುರುಬ ಸಮುದಾಯದವರು ಪ್ರತಿ ಶ್ರಾವಣ ಮಾಸದ ಮೂರನೆ ವಾರದಲ್ಲಿ ಇಲ್ಲಿರುವ ನಾಗರಕಲ್ಲಿಗೆ ಹಾಲನ್ನೆರವುದರ ಮೂಲಕ ಭಕ್ತಿಯನ್ನು ಸರ್ಮಪಿಸುತ್ತಾರೆ.

ಸಂಖ್ಯೆ : ೨೦

ಸ್ಮಾರಕ ಹೆಸರು: ಬೋರೆದೇವರು ದೇವಾಲಯ

ಊರು : ಹೂಡೇಂ

ಸ್ಥಳ : ಹೂಡೇಂನಿಂದ ಉತ್ತರಕ್ಕೆ

ಕಾಲ : ೧೯ನೇ ಶತಮಾನ

ಶೈಲಿ : ಪಾಳೆಯಗಾರರು

ಅಭಿಮುಖ : ಉತ್ತರ

ಸ್ಥಿತಿ : ಸಾಧಾರಣ

ಸಂರಕ್ಷಣೆ : ಸ್ಥಳಿಯರು

ಈ ದೇವಾಲಯವು ಹುಡೇಂ ಗ್ರಾಮದಿಂದ ತಾಯಕನಹಳ್ಳಿಗೆ ಹೋಗುವ ಮಾರ್ಗ ಮಧ್ಯದಲ್ಲಿ ಅಥವಾ ಸೇತುವೆಯ ಪಕ್ಕದಲ್ಲಿರುವ ಬಳಿಗೇರರ ಜಯಣ್ಣ ಮತ್ತು ಲಕ್ಷ್ಮಪ್ಪನವರ ಹೊಲದಲ್ಲಿ ಈ ದೇವಾಲಯವಿದೆ. ಸ್ಥಳೀಯರು ಭೈರವನಿಗೆ ಬೋರೆದೇವರೆಂದು ಕರೆಯುತ್ತಾರೆ, ಈ ದೇವಾಲಯವನ್ನು ಸ್ಥಳೀಯ ಕಣಶಿಲೆಯಿಂದ ನಿರ್ಮಾಣ ಮಾಡಲಾಗಿದೆ. ಗರ್ಭಗುಡಿಯು ಸುಮಾರು ೯ ಅಡಿ ಅಗಲ ೭ ಅಡಿ ಎತ್ತರ ೯ ಅಡಿ ಉದ್ದವನ್ನು ಹೊಂದಿದೆ. ಗರ್ಭಗುಡಿಯಲ್ಲಿ ದೊಡ್ಡ ಗಾತ್ರದ ಭೈರವನ ವಿಗ್ರಹವಿದೆ, ಪಕ್ಕದಲ್ಲಿ ಚಿಕ್ಕದಾದ ಗಣೇಶನ ವಿಗ್ರಹವುಂಟು ಇತ್ತೀಚಿಗೆ ದೇವಾಲಯಕ್ಕೆ ಬಂಡೆಗಳನ್ನು ಹಾಸಿದ್ದು ನಾಲ್ಕು ಕಲ್ಲಿನ ಕಂಬಗಳನ್ನು ಅವಶೇಷಗಳು ಮಾತ್ರ ಇವೆ.

ಇದರ ವಿಸ್ತೀರ್ಣ ಸು.೧೯ ಅಡಿ ಅಗಲ ೧೫ ಅಡಿ ಉದ್ದವಿದ್ದು ನೋಡಲು ಆಕರ್ಷಕವಾಗಿದೆ ಪೊದೆಗಳಿಂದ ಮುಚ್ಚಿಹೋಗಿರುವುದು ದುರದೃಷ್ಟಕರ. ಗರ್ಭಗೃಹದಲ್ಲಿ ಭೈರವನ ನಗ್ನ ಮೂರ್ತಿಯಿದ್ದು, ಅಗಲವಾದ ಮುಖ, ಗಂಭೀರ ಮುಖಮುದ್ರೆ, ಕರ್ಣಕುಂಡಲ, ತ್ರಿಶೂಲ, ಡಮರುಗ, ಪಾಶ, ಪಾನಪಾತ್ರೆ ಮತ್ತು ಅಕ್ಷಮಾಲೆಯಿದೆ, ಹೆಗಲಿನಿಂದ ಸೊಂಟದವರೆಗೆ ಯಜ್ಞೋಪವೀತ, ಕಟಿಸೂತ್ರ, ಮಾಲ್ಯಗಳು ಕಂಡುಬರುತ್ತವಲ್ಲದೆ. ಜಟಾಬಂಧದಲ್ಲಿ ಜಟಾಮಂಡಲಗಳಿವೆ. ಗಂಗರ ಕಾಲದ ಭೈರವ ಶಿಲ್ಪವನ್ನು ಹೋಲುತ್ತದೆ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರುವಿನ ನುಂಕಮಲೆಯಲ್ಲಿ ಭೈರವಸಿದ್ಧರೆಂಬ ಪಂಥ ಬೆಳೆದು ಬಂದಿದೆ. ಈ ಹಿನ್ನಲೆಯಲ್ಲಿ ಹುಡೇಂ ಗ್ರಾಮದ ಭೈರವನನ್ನು ಅವಲೋಕಿಸಬಹುದಾಗಿದೆ. ಈ ದೇವಾಲಯದ ಆವರಣದಲ್ಲಿ ವಿಷ್ಣು, ಸೂರ್ಯ, ಜಿನ ಎಂಬ ಶಿಲ್ಪಗಳಿವೆ.

ಸಂಖ್ಯೆ : ೨೧

ಸ್ಮಾರಕ ಹೆಸರು : ಮಾರಮ್ಮ ದೇವಾಲಯ

ಊರು : ಕಾನಾಹೊಸಹಳ್ಳಿ

ಸ್ಥಳ : ಗ್ರಾಮದ ಮಧ್ಯೆ

ಕಾಲ : ಆಧುನಿಕ

ಶೈಲಿ : ಆಧುನಿಕ

ಅಭಿಮುಖ : ದಕ್ಷಿಣ

ಸ್ಥಿತಿ : ಉತ್ತಮ

ಸಂರಕ್ಷಣೆ:

ದೇವಾಲಯವು ಪ್ರವೇಶ ದಕ್ಷಿಣಾಮುಖವಾಗಿದ್ದು ಗರ್ಭಗೃಹ ಪಶ್ಚಿಮಾಭಿಮುಖವಾಗಿದೆ, ಗರ್ಭಗೃಹದ ದ್ವಾರ ಬಾಗಿನಲ್ಲಿ ಅಲಂಕೃತಗೊಂಡ ಮಯೂರಗಳ ಚಿತ್ರಗಳೆಂದು ಕೂಡಿದೆ. ಗರ್ಭಗೃಹದಲ್ಲಿ ಮಾರಮ್ಮನ ಮೂರ್ತಿಯನ್ನು ಕಾಣಬಹುದು. ಈ ದೇವಾಲಯದಲ್ಲಿ ಹದಿನಾಲ್ಕು ಅರ್ಧಕಂಬ ಹಾಗೂ ಅರೆಬೋಧಿಗೆಗಳನ್ನು ಕಾಣುತ್ತೆವೆ. ಹತ್ತು ಪೂರ್ಣಕಂಭ ಹಾಗೂ

ಬೋದಿಗೆಗಳ ಸುಂದರವಾಗಿ ಅಲಂಕೃತಗೊಂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿರುವ ಶಿಖರವು ಬಹಳ ಆಕರ್ಷಕವಾಗಿದೆ. ಈ ದೇವಾಲಯವು ಕಾನಾಹೊಸಹಳ್ಳಿ ಗ್ರಾಮದ ಪ್ರಮುಖ ಆಕರ್ಷಕವಾಗಿದೆ. ಈ ದೇವಾಲಯವು ಕಾನಾಹೊಸಹಳ್ಳಿ ಗ್ರಾಮದ ಪ್ರಮುಖ ಶಕ್ತಿದೇವತೆಯಾಗಿದ್ದು ತುಂಬಾ ವಿಶೇಷತೆಯಿಂದ ಆರಾಧ್ಯ ದೇವತೆಯಾಗಿದ್ದಾಳೆ ಎನ್ನಬಹುದು.

ಮಾರಿಕಾಂಬೆಯು ಕಾನಾಹೊಸಹಳ್ಳಿ ಗ್ರಾಮದ ಪ್ರಸಿದ್ಧ ಗ್ರಾಮದೇವತೆ ಈ ಹೋಬಳಿಯನ್ನು ಮಾರಮ್ಮದೇವಿ ಪಡೆದುಕೊಂಡಿದ್ದಾಳೆ. ಸುತ್ತಮುತ್ತಲಿನ ಗ್ರಾಮಗಳಿಗೆ ಕಾನಾಹೊಸಹಳ್ಳಿ ಎಂದರೆ ಮಾರಮ್ಮದೇವಿಯೇ ಮೊದಲು ನೆನಪಾಗುತ್ತಾಳೆ, ಅಲ್ಲದೇ ಸ್ಥಳೀಯ ಹಾಗೂ ಸುತ್ತಮುತ್ತಲಿನ ಗ್ರಾಮದವರೆಗೆ ರೋಗ-ರುಜಿನ ಬಂದರೆ ನಿವಾರಣೆಗಾಗಿ ಹರಕೆ ಹೊತ್ತುಕೊಂಡು ಮೂರುವರ್ಷ ಅಥವಾ ಐದು ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯಲ್ಲಿ ಹರಕೆಯನ್ನು ತೀರಸುತ್ತಿರುವುದು ವಿಶೇಷವಾಗಿದೆ. ಜಾತ್ರೆಯ ಸಂದರ್ಭದಲ್ಲಿ ದೇವಸ್ಥಾನದ ಸುತ್ತಮುತ್ತಲಿನ ಹಾಗೂ ಊರಿನ ಮುಖ್ಯದ್ವಾರ ಬಾಗಿಲುಗಳಲ್ಲಿ ವಿದ್ಯುತ ಅಲಂಕಾರಗಳಿಂದ ಹಾಗೂ ತಳಿರು ತೋರಣಗಳಿಂದ ಶೃಂಗರಿಸಲಾಗುತ್ತದೆ. ಅಲ್ಲದೇ ಸಮುದಾಯದವರು ದೇವಿಯ ಆಚರಣೆಗಳನ್ನು ಮಾಡುವುದನ್ನು ಕಾಣಬಹುದು.

"ಹೊಸಹಳ್ಳಿ ಮಾರಮ್ಮ ಐತಿಹ್ಯ"

ಆಂಧ್ರಪ್ರದೇಶದ ಆದವಾನಿ ಮಾರಮ್ಮನ ಮೂಲಸ್ಥಳ, ಮಾರಮ್ಮ ಬಹಳ ಸುಂದರವಂತಳು ಮತ್ತು ಅವಳು ಎಂದೂ ಮನೆಯಿಂದ ಹೊರಗೆ ಬಂದಿರಲಿಲ್ಲ, ಒಂದು ದಿನ ಆಕಳು ಕರು ಮನೆಯಿಂದ ಹಗ್ಗ ಕಿತ್ತು ಹೊರಗೆ ನಗೆಯುತ್ತ ಓಡಿತು, ಅದನ್ನು ಹಿಡಿದು ತರಲು ಹಿಂಭಾಲಿಸಿದಳು ಹೈಕಳ ಜನರ ಮನಸ್ಸು ಮಾರಮ್ಮನ ಮೇಲೆ ಬಿತ್ತು. ಅವಳ ಸುಂದರ ಮೈಕಟ್ಟಿಗೆ ಮಾರು ಹೋದರು, ಬಲತ್ಕಾರ ಕೂಡ ನಡೆಯಿತು, ಆಕೆಗೆ ಅಪಾರ ಅವಮಾನವಾಯಿತು ಅದನ್ನು ತಡೆಯಲಾಗಲಿಲ್ಲ, ತಂದೆಯನ್ನು ಕರೆದುಕೊಂಡು ಬಂಡಿಯನ್ನು ಹೋಡಿಸಿಕೊಂಡು ಪಶ್ಚಿಮದಿಕ್ಕಿಗೆ ಬರುತ್ತಾ ಇದ್ದರು, ತಂದೆಯು ಬಂಡಿಯನ್ನು ನಿಲ್ಲಿಸಿ ಎಲ್ಲಿಯವರೆಗೆ ಈ ಪ್ರಯಣ ? ಎಂದು ಕೇಳಿದನಂತೆ ಅವಳು ನೋಡಪ್ಪಾ ಈ ಬಂಡಿಯ ಹೆಚ್ಚು ಮುರಿದು ಎಲ್ಲಿ ಬಿಳುತ್ತದೊ ಅಲ್ಲಿ ನಿಲ್ಲಸು ಅಲ್ಲಿಯವರೆಗೆ ಹೊಡೆ ಬಂಡಿಯನ್ನು ಎಂದಳು.

ಆಯಿತಮ್ಮ ಎಂದು ತಂದೆಯು ಬಂಡಿಯನ್ನು ಹೊಡೆದುಕೊಂಡು ಈಗಿರುವ ಸ್ಥಳಕ್ಕೆ ಬರುತ್ತಿರುವಾಗ ಹೆಚ್ಚು ಮುರಿದು ಬಿತ್ತಂತೆ ಆಗ ಮಗಳನ್ನು ತಿರುಗಿ ನೋಡಿದನಂತೆ,

ಸುಂದರವಾದ ಮಗಳು ದೈತ್ಯ ರೂಪದ ಮಾರಿಯಂತೆ ಆರ್ಭಟಿಸಿದಳು, ಆ ದೃಶ್ಯ ನೋಡಿದ ಕೂಡಲೇ ಕಿಟ್ಟನೆ ಕೀರಿ ಪ್ರಾಣಬಿಟ್ಟ, ಆತನ ಸಮಾಧಿಯನ್ನು ಇಂದು ಹೊಸಹಳ್ಳಿಯ ಊರ ಬಾಗಿಲು ಮುಂದೆ ಇರುವುದನ್ನು ಕಾಣಬಹುದು ತಂದೆ ಸಮಾಧಿಯೇ ಮುಂದೆ ಹೀಗಿ ನೆಲೆ ನಿಂತಳಂತೆ ಹೀಗೆ ಹೊಸಹಳ್ಳಿ ಮಾರಮ್ಮನ ಬಗ್ಗೆ ಇರುವ ಐತಿಹ್ಯ.

ಸಂಖ್ಯೆ : ೨೨

ಸ್ಮಾರಕಹೆಸರು:ಮೈಲಾರಲಿಂಗೇಶ್ವರ ದೇವಾಲಯ

ಊರು : ಕೆಂಚಮಲ್ಲನ ಹಳ್ಳಿ

ಸ್ಥಳ : ಗ್ರಾಮದ ಮಧ್ಯೆ

ಕಾಲ : ೧೯ನೇ ಶತಮಾನ

ಶೈಲಿ : ಆಧುನಿಕ

ಅಭಿಮುಖ : ಪೂರ್ವ

ಸ್ಥಿತಿ : ಉತ್ತಮ

ಸಂರಕ್ಷಣೆ : ಸ್ಥಳೀಯರು

ಈ ದೇವಾಲಯವು ಕಾನಾಹೊಸಹಳ್ಳಿ ಹೋಬಳಿಯ ಕೇಂದ್ರದಿಂದ ಸುಮಾರು ಹದಿನಾರು ಕಿ.ಮೀ ದೂರದಲ್ಲಿ ಕೆಂಚಮಲ್ಲನಹಳ್ಳಿ ಗ್ರಾಮದಲ್ಲಿದೆ. ಗರ್ಭಗೃಹ, ಸಭಾಮಂಟಪವನ್ನು ಒಳಗೊಂಡಿರುವ ಮೈಲಾರ ಲಿಂಗೇಶ್ವರ ದೇವಾಲಯವು ಪ್ರಸಿದ್ಧವಾಗಿದೆ. ಗರ್ಭಗೃಹದಲ್ಲಿರುವ ಲೋಹದ ಪ್ರತೀಮೆ ಹಾಗೂ ಶಿವಲಿಂಗ ಕಪ್ಪು ಶಿಲೆಯಿಂದ ನಿರ್ಮಾಣಗೊಂಡಿದೆ. ಗರ್ಭಗೃಹದಲ್ಲಿರುವ ನಾಲ್ಕು ಕಂಬಗಳು ಹಾಗೂ ಭೋದಿಗೆಗಳನ್ನು ಒಳಗೊಂಡಿದೆ. ಅದರೆ ಭೋದಿಗೆಗಳ ಅಲಂಕಾರ ಅಷ್ಟಾಗಿ ಇಲ್ಲ ಗರ್ಭಗೃಹದ ಬಾಗಿಲುವಾಡವು ಲೋಹದ ಚೌಕಟ್ಟಿನಿಂದ ಕೂಡಿದೆ.

ಸಭಾಮಂಟಪದಲ್ಲಿ ಹತ್ತು ಕಂಬಗಳು ಎರಡು ಪೂರ್ಣಕಂಬಗಳನ್ನು ಒಳಗೊಂಡಿದೆ. ಈ ದೇವಾಲಯದ ಭಿತ್ತಿಯಲ್ಲಿ ಯಾವುದೇ ಶಿಲ್ಪಗಳು ಕಂಡುಬಂದಿಲ್ಲ ಮುಖಮಂಟಪದಲ್ಲಿ ಇಳಿಜಾರದ ಬಂಡೆಗಳಿಂದ ಮೇಲ್ಛಾವಣಿಯನ್ನು ಕಾಣಬಹುದು. ಈ ದೇವಾಲಯದ ಸುತ್ತಲು ಪ್ರಕಾರ ಗೋಡೆಯಿದ್ದು ಪ್ರದಕ್ಷಿಣ ಪಥವು ವಿಶಾಲವಾಗಿದೆ. ಈ ದೇವಾಲಯದ ಉತ್ಸವವನ್ನು ಮೈಲಾರ ಕಾರಣಿಕವಾದ ಎಂಟು ದಿನಗಳ ನಂತರ ಜಾತ್ರೆ ಮಾಡುತ್ತಾರೆ. ಈ ದೇವಾಲಯದ ಪಕ್ಕದಲ್ಲಿ ನಾಗರ ಕಲ್ಲುಗಳನ್ನು ಕಾಣುತ್ತೆವೆ.

ಸಂಖ್ಯೆ : ೨೩

ಸ್ಮಾರಕ ಹೆಸರು : ವೀರಭದ್ರ ದೇವಾಲಯ

ಊರು : ಸುಣ್ಣಮರಡಿ

ಸ್ಥಳ : ಗ್ರಾಮದ ಮಧ್ಯೆ

ಅಭಿಮುಖ : ಪೂರ್ವ

ಕಾಲ : ಕ್ರಿ.ಶ.ಸು. ೧೭ನೇ ಶತಮಾನ.

ಸ್ಥಿತಿ : ಉತ್ತಮ

ಶೈಲಿ : ವಿಜಯನಗರೋತ್ತರ

ಸಂರಕ್ಷಣೆ : –

ಕಾನಾಹೊಸಹಳ್ಳಿ ಗ್ರಾಮದಿಂದ ಆರು ಕಿ.ಮೀ. ದೂರದಲ್ಲಿರುವ ಸುಣ್ಣಮರಡಿ ಗ್ರಾಮದ ವೀರಭದ್ರ ದೇವಾಲಯವು ಕ್ರಿ.ಶ.ಸು.೧೭ನೇ ಶತಮಾನದ್ದು ವಿಜಯನಗರೋತ್ತರ ಶೈಲಿಯಲ್ಲಿದ್ದು ಕಣಶಿಲೆಯಲ್ಲಿ ನಿರ್ಮಿಸಲಾಗಿದೆ. ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪವನ್ನು ಒಳಗೊಂಡಿದೆ. ಗರ್ಭಗೃಹವು ಚಚೌಕಕಾರವಾಗಿದ್ದು ಇದು ೧.೫೦ ಮೀ.ಉದ್ದ ಮತ್ತು ೧.೫೦ ಮೀ.ಅಗಲವನ್ನು ಹೊಂದಿದೆ. ಇದರ ಮಧ್ಯದಲ್ಲಿ ವೀರಭದ್ರನನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಭುವನೇಶ್ವರಿಯು ಅಷ್ಟಾಕೋನ ಆಕಾರದಲ್ಲಿದ್ದು ಮಧ್ಯದಲ್ಲಿ ಹರಳಿದ ಪುಷ್ಪವಿದೆ. ಪ್ರವೇಶ ದ್ವಾರವು ಎರಡು ಶಾಖೆಗಳನ್ನು ಒಳಗೊಂಡಿದೆ.

ಮೊದಲನೆಯ ಶಾಖೆಯಲ್ಲಿ ಲತಾಸುರುಳಿ ಮತ್ತು ಎರಡನೇಯ ಶಾಖೆಯಲ್ಲಿ ಪುಷ್ಪವನ್ನು ಹೊಂದಿದೆ. ಇಕ್ಕೇಲುಗಳಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಲಲಾಟ ಬಿಂಬದಲ್ಲಿ ಗಣಪತಿಯ ಉಬ್ಬುಶಿಲ್ಪವಿದ್ದು ಇದರ ಉತ್ತರ ಮತ್ತು ದಕ್ಷಿಣದ ಭಿತ್ತಿಯಲ್ಲಿ ಎರಡು ದೇವಕೊಷ್ಟಕಗಳಿವೆ. ಅವುಗಳಲ್ಲಿ ಗಣಪತಿ ಮತ್ತು ದೇವಿಯ ಶಿಲ್ಪಗಳಿವೆ. ಸಭಾಮಂಟಪವು ೪.೨೦.ಮೀ. ಉದ್ದ ಮತ್ತು ೫.೨೦ ಮೀ ಅಗಲ ಹೊಂದಿದೆ. ಇದು ಆರು ಅಂಕಣಗಳನ್ನು ಹೊಂದಿದೆ. ಇದರಲ್ಲಿ ಒಟ್ಟು ಹನ್ನೇರಡು ಕಂಬಗಳಿದ್ದು ಅವುಗಳಲ್ಲಿ ನಾಲ್ಕು ಸ್ವತಂತ್ರ ಕಂಬಗಳು ಮತ್ತು ಎಂಟು ಅರ್ಧಗಂಬಗಳಿವೆ ದೇವಾಲಯದ ಕೆಲವು ಭಾಗಗಳನ್ನ ನವಿಕರಿಸಲಾಗಿದೆ.

ಸಂಖ್ಯೆ : ೨೪

ಸ್ಮಾರಕಹೆಸರು : ಶರಣಬಸವೇಶ್ವರ ದೇವಾಲಯ

ಶೈಲಿ : ವಿಜಯನಗರೋತ್ತರ

ಅಭಿಮುಖ : ಉತ್ತರ

ಊರು : ಕಾನಾಮಡುಗು

ಸ್ಥಿತಿ : ಉತ್ತಮ

ಸ್ಥಳ : ಗ್ರಾಮದ ಉತ್ತರಕ್ಕೆ

ಸಂರಕ್ಷಣೆ : ಮಠದ ವಂಶಸ್ಥರು

ಕಾಲ : ಕ್ರಿ.ಶ.ಸು. ೧೮ನೇ ಶತಮಾನ.

ಈ ದೇವಾಲಯವು ಕಾನಾಹೊಸಹಳ್ಳಿ ಹೋಬಳಿ ಕೇಂದ್ರದಿಂದ ಎಂಟು ಕೀ.ಮೀ. ದೂರದಲ್ಲಿರುವ ಕಾನಾಮಡುಗು ಗ್ರಾಮ ಮಠದಿಂದಲೇ ಮತ್ತು ದೇವಾಲಯದಿಂದ ಹೆಚ್ಚು ಪ್ರಸಿದ್ಧಿ ಹೊಂದಿದೆ. ಶ್ರೀ ಮಠದ ಮಹದ್ವಾರವನ್ನು ಪ್ರವೇಶಿಸುತ್ತಿದ್ದಂತೆ ವಿಶಾಲ ಅಂಗಣದಲ್ಲಿ ಬಲಗಡೆ

ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ಸಿಬ್ಬಂದಿಯ ವಸತಿ ಗೃಹಗಳು ಎಡಬದಿಯಲ್ಲಿ ಅಜ್ಜಿಗದ್ಧಿಗೆ, ಘಂಟೆ ಬಸವಣ ಗದ್ಧಿಗೆ ವಂಶಿಕರ ಗದ್ಧಿಗೆಗಳಿವೆ. ಈ ಗ್ರಾಮದಲ್ಲಿ ಪವಾಡ ಪುರುಷ ಶರಣಬಸವೇಶ್ವರ ಸ್ವಾಮಿಗಳ ಜೀವ ಸಮಾಧಿಯಾದ ನಂತರ ಕ್ರಿಶ. ೧೮೨೦ರ ಅವಧಿಯಲ್ಲಿ ಕಟ್ಟಲಾದ ಈ ದೇವಾಲಯವು ಇದೆ.[೧೩]

ಕಣಶಿಲೆ ಮತ್ತು ಗಾರೆಗಚ್ಚುಗಳನ್ನು ಬಳಸಿ ನಿರ್ಮಿಸಿರುವ ದೇವಾಲಯದಲ್ಲಿ ಗರ್ಭಗೃಹ, ಸಭಾಮಂಟಪಗಳಿವೆ. ಗರ್ಭಗೃಹದಲ್ಲಿ ಶ್ರೀಗಳ ಗದ್ದುಗೆ ಇದ್ದು ಅದರ ಮೇಲೆ ಅವರ ಲೋಹದ ಪ್ರತಿಮೆ ಇದೆ. ಈ ದೇವಾಲಯದಲ್ಲಿ ಹನ್ನೆರಡು ಅರೆಗಂಬಗಳು ಮತ್ತು ಅರೆಭೋದಿಗೆಗಳನ್ನು ಒಳಗೊಂಡಿದ್ದು ಎಂಟು ಪೂರ್ಣಕಂಬಗಳನ್ನು ಕಾಣುತ್ತೇವೆ. ಸಭಾಮಂಟಪದ ಕಂಬಗಳು ಚಚೌಕ ಹಾಗೂ ಅಷ್ಟಮುಖಗಳಲ್ಲಿ ಇವೆ. ಕಂಬಗಳ ಮೇಲ್ಭಾಗದ ಚಾಚು ಪೀಠಗಳು ವಿಜಯನಗರ ಶೈಲಿಯಲ್ಲಿವೆ.

ಸಭಾಮಂಟಪದ ಮೇಲ್ಭಾಗದಲ್ಲಿರುವ ಕೈಪಿಡಿ ಗೋಡೆಯ ಗೂಡುಗಳಲ್ಲಿ ಆಂಜಿನೇಯ, ನರಸಿಂಹ, ಗಣೇಶ, ದಶವತಾರ, ಸ್ಥಂಭಿಕೆ ಮತ್ತು ಕೀರ್ತಿಮುಖಗಳನ್ನು ಬಿಡಿಸಲಾಗಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಮೂವತ್ತು ಅಡಿಗಳಷ್ಟು ಎತ್ತರದ ಶಿಖರವು ಸುಟ್ಟ ಇಟ್ಟಿಗೆ ಗಾರೆಗಳಿಂದ ನಿರ್ಮಿಸಿದ ಶಿವಶರಣರ ಪುಣ್ಯ ಪರುಷರ ವಿಗ್ರಹಗಳನ್ನು ಒಳಗೊಂಡಿದೆ. ದ್ರಾವಿಡ ಮಾದರಿಯಲ್ಲಿ ಇರುವ ಶಿಖರವು ಎರಡು ತಲಾಗಳಿಂದ ಕೂಡಿದೆ. ಇದರ ಮೇಲೆ ಹೂವು ಕೀರ್ತಿಮುಖ ಮತ್ತು ಇತರ ಅಲಂಕರಣಗಳನ್ನು ಗಾರೆಗಚ್ಚಿನಲ್ಲಿ ಮಾಡಲಾಗಿದೆ.

ಈ ದೇವಾಲಯದ ಹಿಂಬದಿಯಲ್ಲಿ ವಿಶಾಲವಾದ ಪ್ರಸಾದ ನಿಲಯ ಅದಕ್ಕೆ ಹೊಂದಿಕೊಂಡತೆ ವಂಶಿಕರು ವಾಸಿಸುವ ಹಳೆಯದಾದ ಮನೆ ಎದುರು ಭಾಗದಲ್ಲಿ ಉಗ್ರಾಣದ ಮನೆಗಳು ಹಿಂಬದಿಯಲ್ಲಿ ಶರಣಚಾರ್ಯರ ತುಪ್ಪದ ಪವಾಡ ನೆಡೆಸಿದ ಬೃಹತ್ ಕಲ್ಲಿನ ಬಾವಿಯಿದೆ.

**ಐತಿಹ್ಯ :**

ಕೂಡ್ಲಿಗಿ ತಾಲೂಕಿನ ಕಾನಾಹೊಸಹಳ್ಳಿ ಹೋಬಳಿಯ ಶರಣಬಸವೇಶ್ವರ ನೆಲೆವೀಡು ಶ್ರೀ ಕ್ಷೇತ್ರ ಕಾನಾಮಡುಗು ಕಾನಾ ಎಂದರೆ ಅನ್ನ ಎಂದು ಮಡುಗು ಎಂದರೆ ಇಡು ಎಂದು ಅರ್ಥೈಸುವಂತೆ ಅನ್ನವನ್ನು ನೀಡುವ ಪುಣ್ಯ ಸ್ಥಳವೇ ಶ್ರೀ ಶರಣ ಬಸವೇಶ್ವರ ದಾಸೋಹಮಠ ಕಾನಾಮಡುಗು ಎಂಬುದು ತಿಳಿದು ಬರುತ್ತದೆ. ಇನ್ನೊಂದು ಹೇಳಿಕೆ ಪ್ರಕಾರ ಕಾನಾ ಎಂದರೆ

ಅಡವಿ ಎಂದು ಮಡುಗು ಎಂದರೆ ಹಬ್ಬರು ಎಂದು ಅರ್ಥೈಸುವಂತೆ ದಟ್ಟವಾಗಿರುವ ಕಾಡು ಎಂದಾಗುತ್ತದೆ, ಬಹುದಿನಗಳ ಹಿಂದೆ ಈ ಭಾಗದಲ್ಲಿ ಕಾಡಿನಿಂದ ಆವೃತ್ತವಾದರು ಆಗಿದ್ದರಿಂದ ಈ ಊರಿಗೆ ಕಾನಾಮಡುಗು ಎಂಬ ಹೆಸರು ಬಂದಿತೆಂದು ಹೇಳಲಾಗಿದೆ.

ಮೂಲತ: ತುಮಕೂರು ಜಿಲ್ಲೆಯ ಅಗಳೀಪುರ ಗ್ರಾಮದ ಭಕ್ತ ಕುಟುಂಬದಲ್ಲಿ ಜನಿಸಿದ ಚನ್ನಬಸಪ್ಪ ಮುಂದೆ ದೈವಾಂಶ ಸಿದ್ಧಿಶಕ್ತಿಯಿಂದ ಮಹಾಮಹಿಮೆನಾಗಿ ಪವಾಡ ಪುರುಷನಾಗಿ ಸಂಚರಿಸುತ್ತ ಕೊನೆಗೆ ಕಾನಮಡುಗುವಿಗೆ ಬಂದು ನೆಲೆನಿಂತು ಕೈಗೊಂಡ ಅನ್ನದಾಸೋಹ ಕಾಯಕ ಶ್ರೀಮಠದ ಸಮಾಜಸೇವೆ ಇಂದಿಗೂ ಎಡಬಿಡದೆ ಸಾಗಿದೆ.

**ನಂಬಿಕೆ :**

ಈ ಭಾಗದ ಪ್ರತಿಮನೆಯಲ್ಲಿ ಹುಟ್ಟಿದ ಬಹುತೇಕ ಹಿರಿಯ ಮಕ್ಕಳಿಗೆ ಶರಣಪ್ಪ, ಶರಣಮ್ಮ, ಚನ್ನಬಸಪ್ಪ, ಚನ್ನಬಸಮ್ಮ ಎಂದು ಶರಣಾರ್ಯರ ನಾಮಕರಣ ಮಾಡುವುದು ಸರ್ವೆಸಾಮನ್ಯವಾಗಿದೆ. ಕಾರ್ತಿಕ ಅಮವಾಸ್ಯೆಯ ಎಳೆದು ತರುವ ಈ ಭಾಗದ ಪ್ರಥಮ ದೊಡ್ಡ ಜಾತ್ರೆ ಇದಾಗಿದ್ದು ಜಾತ್ರೆಗೆ ಬರುವ ಸಹಸ್ರಾರು ಜನರಿಗೂ ಅನ್ನ ದಾಸೋಹ ಏರ್ಪಡಿಸಿ ಧಾರ್ಮಿಕ ಪ್ರವಚನ ಮನೋರಂಜನೆಗೆ ನಾಟಕ ಜನಪದ ನೃತ್ಯಗಳೊಂದಿಗೆ ಸಂತಸಮಯವಾಗಿ ಜಾತ್ರೆ ನೆರವೇರಿಸುವುದು.

ಇಲ್ಲಿಯ ವೈಶಿಷ್ಟ್ಯ ಶ್ರೀ ಮಠಕ್ಕೆ ಹಿಂದಿನ ಯಾವುದೇ ಅರಸೋತ್ತಿಗೆಯ ದತ್ತಿಯಾಗಲಿ ಸರ್ಕಾರದ ನೆರವಾಗಲಿ ಇಲ್ಲದೆ ಭಕ್ತಾಧಿಗಳ ನೆರವೇ ಆಧಾರವಾಗಿದೆ. ರೈತರು ಸುಗ್ಗಿಯಲ್ಲಿ ಬೆಳೆದ ದವಸಧಾನ್ಯ ತರಕಾರಿ ಹಣ್ಣುಹಂಪಲು ಮೀಸಲು ತುಪ್ಪ ಕಾಣಿಕೆ ನೀಡಿ ಆರ್ಶಿವಾದ ಪಡೆಯುತ್ತಾರೆ. ಕಾರಣ ತಮ್ಮಗೆ ತಮ್ಮ ಹೊಲದಲ್ಲಿ ಬೆಳೆದ ಬೆಳೆಗೆ ಯಾವುದೇ ರೋಗರುಜಿನೆ ಕಷ್ಟಕರ್ಪಣೆಗಳು ಬರದಂತೆ ಶರಣೇಶ ಕಾಪಾಡುತ್ತಾನೆ ಎಂಬ ನಂಬುಗೆಯ ಭಕ್ತಿ ಭಾವ ಜನತೆಯದು.

ಸಂಖ್ಯೆ : ೨೫

ಸ್ಮಾರಕಹೆಸರು:ಶ್ರೀಶರಣಬಸವೇಶ್ವರ ದೇವಾಲಯ

ಊರು : ಕುಮತಿ

ಸ್ಥಳ : ಗ್ರಾಮದ ಮಧ್ಯೆ

ಕಾಲ : ಕ್ರಿ.ಶ.ಸು. ೧೭ನೇ ಶತಮಾನ.

ಶೈಲಿ : ವಿಜಯನಗರೋತ್ತರ

ಅಭಿಮುಖ : ಉತ್ತರ

ಸ್ಥಿತಿ : ಸಾಧರಣ

ಸಂರಕ್ಷಣೆ :

ಕುಮತಿ ಗ್ರಾಮವು ಸಣ್ಣ ಪುಟ್ಟ ಬೆಟ್ಟಗುಡ್ಡಗಳಿಂದ ಕೂಡಿದ್ದು ಈ ದೇವಾಲಯವು ಎತ್ತರವಾದ ಪ್ರದೇಶದ ಮೇಲಿದೆ. ದೇವಾಲಯದ ಗರ್ಭಗೃಹದಲ್ಲಿ ಶರಣಬಸವೇಶ್ವರರ ಲೋಹದ ಪ್ರತಿಮೆ ಇದೆ. ದೇವಾಲಯದ ಪೂರ್ವ ಭಾಗದಲ್ಲಿ ಕಂಟಾಂಜನದ ಮೇಲೆ ಹದಿನಾರು ಚೌಕಕಾರದ ಕಂಬಗಳಿಂದ ಕೂಡಿದೆ. ಮೇಲ್ಛಾವಣಿಯು ಬಂಡೆಗಳಿಂದ ಹಾಸಲಾಗಿದೆ. ಈ ದೇವಾಲಯದ ಪಕ್ಕದಲ್ಲಿ ಇನ್ನೊಂದು ಗರ್ಭಗೃಹದಲ್ಲಿ ಗಣೇಶನ ಶಿಲ್ಪವನ್ನು ಕಾಣುತ್ತವೆ. ಪ್ರಾಂಗಣದಲ್ಲಿ ಆಂಜಿನೇಯನ ಶಿಲ್ಪವನ್ನು ಕಾಣುತ್ತೇವೆ. ದೇವಾಲಯದ ಭಿತ್ತಿಯ ಭಾಗವು ಕಲ್ಲುಗೋಡೆಯಿಂದ ನಿರ್ಮಿಸಲಾಗಿದೆ. ಕುಮತಿ ಗ್ರಾಮವು ಮಾನವನ ಶಿಲಾಗೋರಿಗಳಿಂದ ಪ್ರಸಿದ್ಧವಾಗಿದೆ.

ಸಂಖ್ಯೆ : ೨೬

ಸ್ಮಾರಕ ಹೆಸರು : ಸಂಗಮೇಶ್ವರ ದೇವಾಲಯ
ಊರು : ಇಮ್ಮಡಪುರ
ಸ್ಥಳ : ಬೆಟ್ಟದ ಮೇಲೆ
ಕಾಲ : ಕ್ರಿ.ಶ.ಸು. ೨೦ನೇ ಶತಮಾನ.
ಶೈಲಿ : ಆಧುನಿಕ
ಅಭಿಮುಖ :ಪೂರ್ವ
ಸ್ಥಿತಿ : ಸಾಧಾರಣ
ಸಂರಕ್ಷಣೆ : –

ಈ ದೇವಾಲಯವು ಇಮ್ಮಡಾಪುರ ಗ್ರಾಮದಿಂದ ಉತ್ತರಕ್ಕೆ ಒಂದು ಕಿ.ಮೀ. ದೂರದಲ್ಲಿನ ಬೆಟ್ಟದಲ್ಲಿದೆ. ಈ ದೇವಾಲಯದ ಹಿಂಭಾಗದಲ್ಲಿ ಕೂಡ್ಲಿಗಿಯಿಂದ ಚಿತ್ರದುರ್ಗಕ್ಕೆ ಹೋಗುವ ರಾಷ್ಟ್ರೀಯ ಹೆದ್ದಾರಿ ಇರುವುದು ಗರ್ಭಗೃಹ ಮಾತ್ರ ಇದ್ದು ಗರ್ಭಗೃಹದಲ್ಲಿ ಕಪ್ಪುಶಿಲೆಯ ನಂದಿಶಿಲ್ಪ ಇರುವುದು. ಇದರ ಪಕ್ಕದಲ್ಲಿ ಗಣೇಶನ ಶಿಲ್ಪವಿದೆ ಗರ್ಭಗೃಹ ನಾಲ್ಕು ಕಂಬಗಳಿಂದ ಕೂಡಿದ್ದು ಭುವನೇಶ್ವರಿಯು ಸರಳ ಶೈಲಿಯಲ್ಲಿದೆ.

ಸಂಖ್ಯೆ : ೨೭

ಸ್ಮಾರಕ ಹೆಸರು : ಸಿದ್ದಲಿಂಗೇಶ್ವರ ದೇವಾಲಯ
ಊರು : ಕುಮತಿ
ಸ್ಥಳ : ಗ್ರಾಮದ ಮಧ್ಯೆ
ಕಾಲ : ಕ್ರಿ.ಶ.ಸು. ೧೭ನೇ ಶತಮಾನ.
ಶೈಲಿ : ವಿಜಯನಗರೋತ್ತರ
ಅಭಿಮುಖ : ಪೂರ್ವ
ಸ್ಥಿತಿ : ಉತ್ತಮ
ಸಂರಕ್ಷಣೆ : ಸ್ಥಳೀಯರು

ಕಾನಾಹೊಸಹಳ್ಳಿಯಿಂದ ಪೂರ್ವಕ್ಕೆ ೨೨.ಕಿ.ಮೀ. ದೂರದಲ್ಲಿರುವ ಕುಮತಿ ಗ್ರಾಮದ ಮಧ್ಯೆದಲ್ಲಿ ಈ ದೇವಾಲಯವನ್ನು ಕಾಣಬಹುದು. ಗರ್ಭಗೃಹ, ಸಭಾಮಂಟಪಗಳನ್ನು ಒಳಗೊಂಡಿದ್ದು ಗರ್ಭಗೃಹದಲ್ಲಿ ಸಿದ್ದಲಿಂಗ ಯತಿಗಳ ಗದ್ದುಗೆಯು ಎರಡು ಅಡಿ ಎತ್ತರವಾಗಿದ್ದು ಅದರ ಮೇಲ್ಭಾಗದಲ್ಲಿ ಶ್ರೀಗಳ ಲೋಹದ ಪ್ರತಿಮೆ ಇದೆ. ಸಭಾಮಂಟಪದ ನಾಲ್ಕು ಕಂಬಗಳು ಚಚೌಕ ಹಾಗೂ ಅಷ್ಟಮುಖಗಳಲ್ಲಿ ಕೆತ್ತಲಾಗಿದೆ. ಗರ್ಭಗೃಹದ ಮೇಲೆ ಎರಡು ತಲಾಗಳುಳ್ಳ ಶಿಖರ ವಿದೆ. ಎರಡು ತಲಾಗಳಲ್ಲಿ ದೇಗುಲದ ವಾಸ್ತು ಅಲಂಕರಣ ಹಾಗೂ ಕೀರ್ತಿಮುಖಗಳಿವೆ. ಶಿಖರದ ತುದಿಯಲ್ಲಿ ಲೋಹದ ಕಳಶವನ್ನು ಇರಿಸಲಾಗಿದೆ. ಈ ದೇವಾಲಯದ ಪ್ರವೇಶಕ್ಕೆ ಸೋಪಾನಗಳಿದ್ದು ಸುತ್ತ ಪ್ರಕಾರ ಗೋಡೆಯನ್ನು ಹೊಂದಿದೆ. ಪ್ರದಕ್ಷಣ ಪಥಕ್ಕೆ ವಿಶಾಲವಾದ ಜಾಗ ಹೊಂದಿದೆ. ಈ ದೇವಾಲಯದ ಹಿಂಭಾಗದಲ್ಲಿ ಒಂದು ಬುರುಜು ಇರುವುದನ್ನು ಕಾಣುತ್ತೇವೆ.

ಸಂಖ್ಯೆ : ೨೮

ಸ್ಮಾರಕ ಹೆಸರು : ಸಿದ್ದಲಿಂಗೇಶ್ವರ ಹೊರಮಠ

ಊರು : ಕುಮತಿ

ಸ್ಥಳ : ಗ್ರಾಮದ ಉತ್ತರಕ್ಕೆ

ಕಾಲ : ಕ್ರಿ.ಶ.ಸು. ೧೯ನೇ ಶತಮಾನ.

ಶೈಲಿ : ಪಾಳೆಯಗಾರರ

ಅಭಿಮುಖ : ಪೂರ್ವ

ಸ್ಥಿತಿ : ಉತ್ತಮ

ಸಂರಕ್ಷಣೆ :

ಈ ದೇವಾಲಯವು ಕುಮತಿ ಗ್ರಾಮದಿಂದ ೧.೩೦.ಕಿ.ಮೀ. ದೂರದ ಉತ್ತರಕ್ಕೆ ಜನಿಗಿ ಹಳ್ಳದ ಬಲದಂಡೆಯ ಮೇಲಿದೆ. ಗರ್ಭಗೃಹ, ಸಭಾಮಂಟಪ, ಮುಖಮಂಟಪ ಒಳಗೊಂಡಿದ್ದು ದೇವಾಲಯದ ಸುತ್ತಲು ಪ್ರಕಾರ ಗೋಡೆಯನ್ನು ಕಾಣುತ್ತವೆ. ಗರ್ಭಗೃಹದಲ್ಲಿ ಕಪ್ಪುಶಿಲೆಯಿಂದ ಕೂಡಿರುವ ಶಿವಲಿಂಗ ಮತ್ತು ಕುದುರೆ ಏರಿರುವ ನಾಯಕನ ಶಿಲ್ಪವಿದೆ. ಸ್ಥಳೀಯರು ಈ ಶಿಲ್ಪವನ್ನು ನುಂಕೆಮಲೆ ಸಿದ್ಧೇಶ ಎಂದಿದ್ದಾರೆ. ಕೂಡ್ಲಿಗಿ ಮತ್ತು ಮಾಳಕಾಲ್ಮೂರು ಪರಿಸರದಲ್ಲಿ ದೈವಿನೆಲೆಯಲ್ಲಿ ಪ್ರಸಿದ್ಧವಾದ ನುಂಕೆಮಲೆ ಸಿದ್ದೇಶನನ್ನು ಗಣ್ಯಮಾನ್ಯನನ್ನಾಗಿ ತರುವುದು ಈ ಪ್ರಾದೇಶಿಕ ಜನರ ಮನೋಧರ್ಮವನ್ನು ಇಲ್ಲಿ ಕಾಣಬಹುದಾಗಿದೆ.[೧೫]

ಈ ದೇವಾಲಯದ ಭಿತ್ತಿಯನ್ನು ಕಲ್ಲಿನಿಂದ ಕಟ್ಟಲಾಗಿದೆ. ಸಭಾಮಂಟಪದಲ್ಲಿ ಆರು ಕಂಬಗಳಿಂದ ಕೂಡಿದ್ದು ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭವನ್ನ ನಿರ್ಮಿಸಲಾಗಿದೆ. ಇದರ ಪಕ್ಕದಲ್ಲಿ ಎರಡು ವೀರಗಲ್ಲುಗಳನ್ನು ನೆಟ್ಟಿದ್ದಾರೆ. ದೇವಾಲಯದ ಮುಂಭಾಗದಲ್ಲಿ

ಪ್ರತೀಕವಾದ ಕಟ್ಟೆಯ ಮೇಲೆ ಕುದುರೆಯನ್ನು ಏರಿರುವ ವೀರನ ಶಿಲ್ಪವಿದೆ. ಕುಮತಿಯ ಸ್ಥಳೀಯರು ಈ ದೇವಾಲಯದಲ್ಲಿ ಹಬ್ಬ, ಉತ್ಸವ, ಆಚರಣೆಗಳನ್ನ ನೆಡೆಸಿಕೊಂಡು ಬಂದಿದ್ದಾರೆ,

**೩.೨ ಧಾರ್ಮಿಕ ಮೂರ್ತಿಶಿಲ್ಪಗಳು**

ದೇವಾಲಯವನ್ನು ನಿರ್ಮಿಸಿದರೆ ಅಲ್ಲಿ ಮೂರ್ತಿಶಿಲ್ಪ ಇರಲೇಬೇಕು. ದೇವರ ಆಲಯವು ಹಲವಾರು ರೀತಿಯ ಪೂಜೆ-ಪುನಸ್ಕಾರಗಳು, ಹಬ್ಬಗಳು, ಜಾತ್ರೆಗಳು, ಉತ್ಸವಗಳು, ಸಮಾಜದ ಜನಸಾಮಾನ್ಯರ ಮೇಲೆ ಪ್ರಭಾವವನ್ನು ಬೀರಿವೆ.[೧೬] ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಕ್ಕೆ ಪರಸ್ಪರ ಅವಿನಾಭಾವ ಸಂಬಂಧವಿರುವುದನ್ನು ನಾವು ನೋಡಬಹುದು. ವಾಸ್ತುಶಿಲ್ಪದ ಜೋತೆಯಲ್ಲಿಯೇ ಮೂರ್ತಿಶಿಲ್ಪವೂ ಬೆಳೆದು ಬಂದಿದೆ ಎನ್ನುವುದು ಹಲವಾರು ವಿದ್ವಾಂಸರ ಅಭಿಪ್ರಾಯ ಮತ್ತು ವಾದ. ಆದರೆ ವಾಸ್ತುಶಿಲ್ಪಕ್ಕಿಂತಲೂ ಮೂರ್ತಿಶಿಲ್ಪಕ್ಕೆ ಪ್ರಾಚೀನವಾದ ಇತಿಹಾಸವಿದೆ. ವಾಸ್ತುಶಿಲ್ಪವು ದೇವರುಗಳಿಗೆ ಆಲಯದಂತಿದ್ದರೆ ಮೂರ್ತಿಶಿಲ್ಪವು ದೇವರಿಗೆ ಮೂರ್ತಿ ಸ್ವರೂಪವನ್ನು ನೀಡಿದೆ ಅಂದರೆ ದೇವರುಗಳ ಕಲ್ಪನೆಯ ಸಂಕೇತಿಕವಾಗಿ ಮೂರ್ತಿ ಶಿಲ್ಪವು ಸ್ವರೂಪ ಪಡೆದುಕೊಂಡಿದೆ. ಪ್ರಾಚೀನ ಕಾಲದ ಮಾನವನು ಪರಿಸರದಲ್ಲಾಗುತ್ತಿದ್ದ ಬದಲಾವಣೆಗಳ ಹಿಂದೆ ಯಾವುದೇ ಅಗೋಚರ ಶಕ್ತಿಯಿದೆ ಎಂದು ನಂಬಿ ಅವುಗಳನ್ನು ಸಾಂಕೇತಿಕವಾಗಿ ಮೂರ್ತಿಕರಿಸಲು ಪ್ರಾರಂಭಿಸಿದ. ನಂತರ ಇದು ಅವನ ಕಣ್ಣಿಗೆ ಕಾಣದ ಶಕ್ತಿಯನ್ನು ಪ್ರತಿನಿಧಿಸಲು ಒಂದು ನೆಲೆಯನ್ನೋ ಒಂದು ವಸ್ತುವನ್ನೋ ಮಣ್ಣಿನ ಅಥವಾ ಕಲ್ಲಿನ ಗೊಂಬೆಯನ್ನು ಮಾಡಿಕೊಂಡು ಪೂಜಿಸಲು ಕಾರಣವಾಯಿತು. ಈ ರೀತಿ ತಯಾರಾದ ಮೂರ್ತಿಶಿಲ್ಪಗಳನ್ನು ನಾವು ಹಲವಾರು ಉತ್ಖನನಗಳಲ್ಲಿ ದೊರೆತ ಅವಶೇಷಗಳಲ್ಲಿ ಕಾಣುತ್ತವೆ.[೧೭]

ಶಿಲ್ಪ ಎನ್ನುವ ಮಾತು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿತ್ತು. ಪ್ರಸಿದ್ಧವಾದ ೬೪ ಕಲೆಗಳಲ್ಲಿ ಶಿಲ್ಪ ಎನ್ನುವ ಹೆಸರು ಅನ್ವಯವಾಗುತ್ತಿತ್ತು. ಮುಂದೆ ಈ ಪದದ ವ್ಯಾಪ್ತಿ ಪರಿಮಿತಿಗೊಂಡು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥಕ್ಕೆ ಸೀಮಿತವಾಯಿತು.[೧೮] ಜಗತ್ತಿನ ಸೃಷ್ಟಿ ಯಾವಾಗ ಆಯಿತೋ ಆಗಲೇ ಶಿಲ್ಪವು ಪ್ರಾರಂಭ ವಾಗಿದೆಯೆಂದು ವೇದವು ಹೇಳಿದೆ. ಈ ಜಗತ್ತಿನ ಸೃಷ್ಟಿಕರ್ತನನ್ನು ಜಗತ್ ಶಿಲ್ಪ ಎಂದು ವರ್ಣಿಸಿರುವುಂಟು. ಶಿಲ್ಪ ಎಂಬ ಪದವು ಶೀಲಸಮುಧೌ ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಸಮಾಧಿ ಎಂಬ ಅರ್ಥವುಳ್ಳ ಶಿಲೆ ಎಂಬ ಧಾತುವು ತಪಸ್ಸನ್ನು ಸೂಚಿಸುತ್ತದೆ.[೧೯] ಶಿಲಾ ಸಮುಧೌ ಶೀಲ್ಯದ ಇತಿಶಿಲ್ಪ ಮನಸ್ಸು ಸಮಾಧಿ ಸ್ಥಿತಿಯಲ್ಲಿದ್ದಾಗ ರೂಪಿತವಾಗುವ ಕರಕುಶಲ ವಸ್ತುವೇ ಶಿಲ್ಪ ಎಂದು ಹೇಳಿರುವುದು ಶಿಲ್ಪ ಶಬ್ಧದ ವ್ಯಾಪಕ ಅರ್ಥ ವಿಸ್ತಾರವನ್ನು ಈ ಹಂತದಲ್ಲಿ ಕಾಣಬಹುದು.[೨೦] ಶಿಲ್ಪಂ

ಕರ್ಮಕಲಾಧಿಕಂ ಎನ್ನುವುದು ಅಮರಸಿಂಹನ ಅಮರಕೋಶದ ವಿವರಣೆಯಾಗಿದೆ. ಕರ್ತೃವಿನ ಅಧಿಕ ಕೌಶಲ್ಯವನ್ನೊಳಗೊಂಡ ಕರ್ಮ ಅಥವಾ ಕ್ರಿಯೆಗೆ ಶಿಲ್ಪವೆಂದು ಹೆಸರು ಭಾರತೀಯ ಕಲೆಯಲ್ಲಿ ವಾಸ್ತು, ಮೂರ್ತಿ, ಚಿತ್ರಕಲೆಗಳಿಗೆ ಸಂಬಂಧಿಸಿದ ಒಟ್ಟಾರೆ ಅಧ್ಯಯನವನ್ನು ಶಿಲ್ಪಶಾಸ್ತ್ರವೆಂದು ಗುರುತಿಸಲಾಗಿದೆ. ಮೂರ್ತಿ ಎಂಬ ಪದಕ್ಕೆ ಪರ್ಯಾಯವಾಗಿ ಬಳಸಿದ ಪದಗಳಾದ ಪ್ರತಿಮಾ, ಬಿಂಬ, ಪ್ರತಿಕೃತಿ, ವಿಗ್ರಹ ಮುಂತಾದ ಶಿಲ್ಪಗಳು ಅದೊಂದು ಭೌತಿಕವಸ್ತು ಎಂಬಂತೆ ಅರ್ಥ ಮಾಡಿಕೊಡುತ್ತವೆ.[೨೧]

ಕಾಶ್ಯಪಶಿಲ್ಪ, ಮಾನಸಾರ, ಸಮರಾಂಗಣಸೂತ್ರಧಾರ, ಶಿಲ್ಪರತ್ನಂ, ಮಯಮತಂ, ಮಯವಾಸ್ತುಶಾಸ್ತ್ರ, ಸಕಲಾಧಿಕಾರ, ಕಾಶ್ಯಪಸಂಹಿತೆ, ದೇವತಾಮೂರ್ತಿ, ಲಕ್ಷಣಪ್ರಸಾದಮಂಡನ, ರಾಜವಲ್ಲಭದಂತಹ ಇಪ್ಪತ್ತು ಗ್ರಂಥಗಳು ಅತಿ ಪ್ರಮುಖವಾಗಿದ್ದು ಇವು ಶಿಲ್ಪಶಾಸ್ತ್ರದ ಬಗ್ಗೆ ತಿಳಿಸುತ್ತದೆ.[೨೨] ಮೂರ್ತಿಶಿಲ್ಪವು ವಾಸ್ತುಶಿಲ್ಪ ಒಂದು ಭಾಗವಾಗಿ ಬೆಳೆದು ಬಂದಿದ್ದು, ಕ್ರಿ.ಪೂ.೩೦೦೦ ಕ್ಕಿಂತ ಪ್ರಾಚೀನವೆನಿಸಿದ ವೃಷಭ, ನರ್ತಕಿಯ ವಿಗ್ರಹ, ಮುದ್ರೆಯ ಮೇಲೆ ಪಶುಪತಿಯಂತಹ ಚಿತ್ರಣಗಳೂ ಕಂಡುಬಂದಿವೆ.[೨೩]

ಪ್ರಸ್ತುತ ಅಧ್ಯಯನದ ಕಾನಾಹೊಸಹಳ್ಳಿ ಹೋಬಳಿಯ ಪರಿಸರದಲ್ಲಿ ಹಲವಾರು ಶಿಲ್ಪಗಳು ಕಂಡುಬಂದರೂ ಅಧ್ಯಯನದ ದೃಷ್ಟಿಯಿಂದ ಪ್ರಮುಖವಾದ ಶೈವ, ವೈಷ್ಣವ, ಶಾಕ್ತ, ಜೈನ, ಇತರೆ ಶಿಲ್ಪಗಳೆಂದು ವಿಂಗಡಿಸಿ ಅಧ್ಯಯನ ಮಾಡಲಾಗಿದೆ.

**ಶೈವ ಮೂರ್ತಿಶಿಲ್ಪಗಳು**

ಶೈವಧರ್ಮ ಅತೀ ಪ್ರಾಚೀನ ಧರ್ಮಗಳಲ್ಲಿ ಒಂದು. ಹರಪ್ಪ, ಮೊಹೆಂಜೋದಾರೊ ಸಂಸ್ಕೃತಿಗಳ ಅವಶೇಷಗಳಲ್ಲಿ ಶಿವನ ಸ್ತಂಭಾಕಾರದ ಲಿಂಗಗಳು ಕಂಡುಬರುವುದರಿಂದ ಶೈವಧರ್ಮವು ಸಿಂಧೂ ನಾಗರಿಕತೆಯಿಂದ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿತ್ತೆಂದು ಊಹಿಸಬಹುದು. ಶೈವಧರ್ಮವು ಎಷ್ಟು ಪ್ರಾಚೀನವೋ ಅಷ್ಟೇ ವ್ಯಾಪಕವಾಗಿ ಹರಡಿತ್ತೆಂಬುವುದಕ್ಕೆ ಎಲ್ಲೆಡೆಗಳಲ್ಲಿಯೂ ಕಾಣುವ ಶಿವ ದೇವಾಲಯಗಳು ಮತ್ತು ಲಿಂಗಗಳೇ ಸಾಕ್ಷಿಯಾಗಿವೆ.[೨೪] ಅಧ್ಯಯನ ಕ್ಷೇತ್ರವಾದ ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಶೈವ ಶಿಲ್ಪಗಳಲ್ಲಿ ಉದ್ಭವ ಮೂರ್ತಿಗಳು, ಲಿಂಗಗಳು, ನಂದಿ, ಗಣೇಶ, ಭೈರವ ಇತ್ಯದಿ ಶಿಲ್ಪಗಳು ಪ್ರಮುಖವಾಗಿ ಈ ಪರಿಸರದಲ್ಲಿ ಕಂಡುಬರುತ್ತವೆ.

**ಶಿವಲಿಂಗಗಳು :**

ಶಿವನನ್ನು ಲಿಂಗದ ರೂಪದಲ್ಲಿ ಪೂಜಿಸುವುದು ಸರ್ವೇಸಾಮಾನ್ಯವಾಗಿದೆ. ಪ್ರಸ್ತುತ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹೆಚ್ಚಾಗಿ ಶಿವನನ್ನು ಲಿಂಗದ ರೂಪದಲ್ಲಿ ಪೂಜಿಸುತ್ತಿರುವುದು

ಅಧ್ಯಯನದಿಂದ ಕಂಡುಬರುತ್ತದೆ. ಶಿವಲಿಂಗದಲ್ಲಿ ಚಲಲಿಂಗ ಮತ್ತು ಅಚಲಲಿಂಗ ವೆಂಬ ಎರಡು ವಿಧಗಳಿದ್ದು, ಸುಪ್ರಬೇಧಾಗಮದ ಪ್ರಕಾರ ಅಚಲಲಿಂಗದಲ್ಲಿ ಒಂಬತ್ತು ನಮೂನೆಯ ಲಿಂಗಗಳಿವೆ. ಸ್ವಯಂಭ, ಪುರುವ, ದೈವತ, ಗಾಣಪತ್ಯ, ಅಸುರ, ಸುರ, ರಾಕ್ಷಸ, ಮಾನುಸ, ಬಾಣಲಿಂಗಗಳಾಗಿವೆ. ಅಚಲ ಲಿಂಗದಲ್ಲಿ ಮೂರು ಭಾಗಗಳಿದ್ದು, ಕೆಳಗಿನ ಭಾಗದಲ್ಲಿ ಬ್ರಹ್ಮನನ್ನು ಪ್ರತಿನಿಧಿಸುವ ಅಷ್ಟಕೋನಾಕಾರದ ವಿಷ್ಣು ಭಾಗವಿರುತ್ತದೆ. ಇವೆರಡು ಭಾಗಗಳೂ ಸಹ ಪಾಣಿಪೀಠದಲ್ಲಿ ಸೇರಿರುತ್ತವೆ. ರುದ್ರಭಾಗವು ಕೊಳವೆ ಆಕೃತಿಯಲ್ಲಿದ್ದು, ಪಾಣಿ ಪೀಠದ ಮೇಲಿನ ಈ ಭಾಗವು ಪೂಜೆಗೊಳಿಸುತ್ತದೆ.[೨೫]

ಶಿವಲಿಂಗಗಳಲ್ಲಿ ಅರ್ಧಚಂದ್ರಾಕೃತಿಯ, ವೃತ್ತಾಕಾರದ, ಬಾಣಾಕಾರದ ಲಿಂಗಗಳು ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಹೆಚ್ಚಾಗಿ ಕಂಡುಬಂದಿವೆ. ಪೀಠದಲ್ಲಿ ವೃತ್ತಾಕಾರ, ಚೌಕಾಕಾರ, ಆಯಾತಾಕಾರದ ಪೀಠಗಳೂ ಸಹ ವಿವಿಧ ಭಾಗಗಳಲ್ಲಿ ಕಂಡುಬರುತ್ತವೆ. ಶಿವಲಿಂಗಗಳಿಗೆ ಹಾಗೂ ಅವುಗಳ ಪೀಠಭಾಗಗಳಿಗೆ ಕಪ್ಪುಶಿಲೆಯನ್ನು ಬಹಳ ಉಪಯೋಗಿಸಿದ್ದಾರೆ. ಕಾನಾಹೊಸಹಳ್ಳಿ, ಹುಲಿಕೆರೆ, ಕಾನಾಮಡುಗು, ಕಲ್ಲಹಳ್ಳಿ, ಬಣವಿಕಲ್ಲು, ಕೆಂಚಮಲ್ಲನಹಳ್ಳಿ, ರಂಗನಾಥಹಳ್ಳಿ, ಬಯಲುತುಂಬರಗುದ್ದಿ, ಕುಮತಿ, ಪೂಜಾರಹಳ್ಳಿ ಇತ್ಯಾದಿ ಕಡೆಗಳಲ್ಲಿ ವಿಭಿನ್ನ ಕಾಲಘಟ್ಟದಲ್ಲಿ ನಿರ್ಮಿತವಾದ ವೈವಿಧ್ಯಮಯವಾದ ಶಿವಲಿಂಗಗಳು ಕಂಡುಬಂದಿವೆ.

**ಶಿವಲಿಂಗ**

ಈ ಶಿವಲಿಂಗವು ಕಾನಾಹೊಸಹಳ್ಳಿ ಗ್ರಾಮದ ಕಲ್ಲೇಶ್ವರ ದೇವಾಲಯದ ಗರ್ಭಗೃಹದಲ್ಲಿ ಕಂಡುಬರುತ್ತದೆ. ಕೆತ್ತನೆ ಮತ್ತು ಬಳಸಿದ ಕಲ್ಲಿನ ಮೇಲೆ ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿದೆ. ಅರ್ಧ ಅಡಿ ಎತ್ತರ ಪೀಠದ ಪಟ್ಟಿಕೆಯ ಮೇಲೆ ರಚನೆಗೊಂಡಿದೆ. ಶಿವಲಿಂಗವು ೫೫ ಸೆಂ.ಮೀ. ಎತ್ತರ ವಾಗಿದ್ದು, ಬಲಭಾಗವು ವೃತ್ತಾಕಾರವಾಗಿ ಪ್ರನಾಳದ ಕಡೆ ಸಣ್ಣದಾಗುತ್ತಾ ಹೋಗಿರುವುದು. ಈ ಲಿಂಗಕ್ಕೆ ಮಾಡಿರುವ ವಿಶೇಷವಾದ ಅಭಿಷೇಕ ಪಾನೀಯವು ಪ್ರನಾಳದ ಮೂಲಕ ಹೊರಹೋಗುವುದು. ಈ ಲಿಂಗಕ್ಕೆ ಪ್ರತಿ ಸೋಮವಾರವು ವಿಶೇಷವಾಗಿ ಆಚರಿಸುತ್ತಾರೆ.

**ಶಿವಲಿಂಗ**

ಈ ಲಿಂಗವು ತೂರೆಕಲ್ಲಹಳ್ಳಿ ಗ್ರಾಮದಿಂದ ಪೂರ್ವದಲ್ಲಿ ಹರಿಯುವ ಜನ್ನಿಗಿಹಳ್ಳದ ಎಡದಂಡೆಯ ಮೇಲಿರುವ ಕಲ್ಲೇಶ್ವರ ದೇವಾಲಯದಲ್ಲಿದೆ. ಲಿಂಗದ ಕೆಳಗಿನ ಭಾಗ ಚೌಕಾಕರದ

ಪಟ್ಟಿಕೆಯನ್ನು ಹೊಂದಿದ್ದು, ಪಾಣಿಪೀಠವು ವೃತ್ತಾಕಾರವಾಗಿದೆ. ಈ ಪಾಣಿಪೀಠದ ಮೇಲಿನ ಲಿಂಗವು ಅರ್ಧ ಚಂದ್ರಾಕೃತಿಯಲ್ಲಿ ಕಾಣಿಸುತ್ತದೆ. ಈ ಶಿವಲಿಂಗವನ್ನು ಕಪ್ಪುಶಿಲೆಯಲ್ಲಿ ಬಳಸಿದ್ದು, ಇದರ ಲಕ್ಷಣಗಳ ಮೇಲೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿಸಿದ್ದಾರೆ ಎಂದು ಹೇಳಬಹುದು.

**ನಂದಿಶಿಲ್ಪಗಳು**

ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಪ್ರತಿ ಶೈವದೇವಾಲಯಗಳಲ್ಲಿ ನಂದಿ ಶಿಲ್ಪಗಳಿರುವುದನ್ನು ಕಾಣುತ್ತೇವೆ. ಈ ಶಿಲ್ಪಗಳು ಹೆಚ್ಚಾಗಿ ಗರ್ಭಗೃಹದಲ್ಲಿರುವ ಶಿವಲಿಂಗಕ್ಕೆ ಅಭಿಮುಖವಾಗಿ ಅಂತರಾಳ ಅಥವಾ ಸಭಾಮಂಟಪದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿವೆ. ಕೆಲವೊಂದು ಗರ್ಭಗೃಹದಲ್ಲಿ ಕಾಣಬಹುದು. ಸಾಮಾನ್ಯವಾಗಿ ಈ ಎಲ್ಲಾ ನಂದಿಶಿಲ್ಪಗಳನ್ನು ಪೀಠದ ಮೇಲೆ ಕುಳ್ಳಿರಿಸಿರುವಂತೆ ಕಂಡರಿಸಲಾಗಿದೆ. ಇವುಗಳು ತನ್ನ ಮುಂದಿನ ಬಲಗಾಲನ್ನು ಹಿಂದಕ್ಕೆ ಮಡಿಚಿ ಎಡಗಾಲನ್ನು ಸ್ವಲ್ಪ ಮುಂದಕ್ಕೆ ಚಾಚಿರುವಂತೆ ಹಿಂದಿನ ಬಲಗಾಲನ್ನು ಮುಂದಕ್ಕೆ ಚಾಚಿ ಎಡಗಾಲನ್ನು ಹೊಟ್ಟಯ ಕೆಳಗೆ ಎಳೆದುಕೊಂಡು ಮಡಿಚಿ ಮಲಗಿರುವಂತೆ ಚಿತ್ರಿಸಲಾಗಿದೆ. ತನ್ನ ತಲೆಯನ್ನು ಮುಂದಕ್ಕೆ ನೇರವಾಗಿ ಚಾಚಿಕೊಂಡಿರುತ್ತವೆ. ನಂದಿಗಳಿಗೆ ಘಂಟಾಕಾರ, ಗಗ್ಗರ, ಕೊರಳಸರ, ಹಣೆಪಟ್ಟಿ, ಕಾಲ್ಗಡಗ, ಮುಂತಾದ ಆಭರಣಗಳಿಂದ ಅಲಂಕರಿಸಲಾಗಿದೆ.

ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕಾನಾಹೊಸಹಳ್ಳಿ ಹೋಬಳಿಯ ವ್ಯಾಪ್ತಿಯಲ್ಲಿ ಬರುವ ನಂದಿಗಳನ್ನು ಹುಲಿಕೆರ, ಕಾನಾಹೊಸಹಳ್ಳಿ, ಕಾನಾಮಡುಗು, ಕೆಂಚಮ್ಮಲ್ಲನಹಳ್ಳಿ, ಕಲ್ಲಹಳ್ಳಿ, ಪೂಜಾರಹಳ್ಳಿ, ಹೂಡೇಂ ಮುಂತಾದ ಕಡೆಗಳಲ್ಲಿ ಕಂಡುಬರುತ್ತವೆ.

**ನಂದಿಶಿಲ್ಪ**

ಹುಲಿಕೆರೆ ಗ್ರಾಮದ ಕಲ್ಲೇಶ್ವರ ದೇವಾಲಯದ ಸಭಾಮಂಟಪದಲ್ಲಿರುವ ನಂದಿ ಶಿಲ್ಪವು ಕಪ್ಪು ಶಿಲೆಯಿಂದ ಕೂಡಿದೆ. ಅರ್ಧ ಅಡಿ ಎತ್ತರದ ಪೀಠದ ಮೇಲೆ ನಂದಿಯು ಕುಳಿತಿರುವ ಭಂಗಿಯಲ್ಲಿದೆ. ಈ ನಂದಿಯು ಮುಂದಿನ ಎಡಗಾಲನ್ನು ಹಿಂದಕ್ಕೆ ಮಡಿಚಿಕೊಂಡು ಬಲಗಾಲನ್ನು ಸ್ವಲ್ಪ ಮುಂದಕ್ಕೆ ಚಾಚಿಕೊಂಡಿದೆ. ಹಿಂದಿನ ಎಡಗಾಲನ್ನು ಮುಂದಕ್ಕೆ ಚಾಚಿ ಬಲಗಾಲನ್ನು ಹೊಟ್ಟೆಯ ಕೆಳಗೆ ಎಳೆದುಕೊಂಡು ಮಡಿಚಿರುವಂತೆ ಚಿತ್ರಿಸಲಾಗಿದೆ. ಈ ನಂದಿಯು ಘಂಟಾಕಾರ, ಗಗ್ಗರ, ಕೊರಳಸರ, ಹಣೆಪಟ್ಟಿ, ಕಾಲ್ಗಡಗ, ಮುಂತಾದ ಆಭರಣಗಳಿಂದ ಅಲಂಕರಿಸಲಾಗಿದೆ.

**ನಂದಿಶಿಲ್ಪ**

ಕಾನಾಹೊಸಹಳ್ಳಿ ಗ್ರಾಮದ ಕಲ್ಲೇಶ್ವರ ದೇವಾಲಯದ ಗರ್ಭಗುಡಿಗೆ ಅಭಿಮುಖವಾಗಿರುವ ಈ ನಂದಿಶಿಲ್ಪವು ಕಪ್ಪುಶಿಲೆಯಿಂದ ಕೂಡಿದ್ದು ಕುಳಿತಿರುವ ಭಂಗಿಯಲ್ಲಿದೆ. ನಂದಿಯ ಕಿವಿಗಳು

ನಿಮಿರಿದ್ದು ಹಣೆಯಪಟ್ಟಿಯನ್ನು ಹೊಂದಿದೆ. ಭುಜವು ಉಬ್ಬಿದ್ದು, ಕೊರಳಿನಿಂದ ಹಿಡಿದು ಬೆನ್ನಿನ ಭಾಗದ ಮೇಲಿಂದ ಸುತ್ತುವರಿದ ಸಣ್ಣ ಪಟ್ಟಿಕೆ ಸರವಿದೆ.

**ನಂದಿಶಿಲ್ಪ**

ಕೆಂಚಮ್ಮಲ್ಲನಹಳ್ಳಿ ಗ್ರಾಮದ ಆಂಜನೇಯ ದೇವಾಲಯದ ಮುಂಭಾಗದ ದ್ವೀಪಸ್ತಂಭದ ಕಟ್ಟೆಯ ಮೇಲೆ ಈ ನಂದಿಶಿಲ್ಪವನ್ನು ಕಾಣಬಹುದು. ಈ ನಂದಿಯ ಉದ್ದ ೩೧ ಇಂಚು ಅಗಲ ೧೩ ಇಂಚು ಹೊಂದಿದ್ದು ಕಪ್ಪುಶಿಲೆಯಿಂದ ಕೆತ್ತಲಾಗಿದೆ. ಕೊರಳಿನಲ್ಲಿ ಸಾರಮಾಲೆ ಹಾಗೂ ಹಣೆಪಟ್ಟಿ ಹೊಂದಿದೆ. ಬೆನ್ನಿನ ಭಾಗವು ಉಬ್ಬಗಿದೆ. ಕೊರಳಿನಲ್ಲಿ ಘಂಟಾಸರ ಹಾಗೂ ಮತ್ತೊಂದು ಘಂಟಾಸರ ಬೆನ್ನಿನ ಮೇಲುಭಾಗದಲ್ಲಿ ಇಳಿಬಿದ್ದಿದೆ, ಕಾಲ್ಗಡಗಳನ್ನು ಸಹ ಈ ನಂದಿಯು ಹೊಂದಿದೆ ಕೊರಳಿನಿಂದ ಹಿಡಿದು ಭುಜದ ಮೇಲೆ ಹೋಗಿ ಬಾಲದಿಂದ ಸುತ್ತುವರಿದು ಸಣ್ಣ ಘಂಟೆಯ ಪಟ್ಟಿಕೆಯನ್ನು ಹೊಂದಿದೆ. ಸ್ಥಳೀಯರು ಹೇಳುವಾಗೆ ಈ ಶಿಲ್ಪವನ್ನು ಬೊಪ್ಪಸಮುದ್ರದಿಂದ ಕರ್ಣಂ ಲಕ್ಷ್ಮೀಪತಿಭಟ್ಟರು ಶಾನುಭೋಗ ಕೆಲಸ ಸಿಕ್ಕಿದ್ದರಿಂದ ಕೆಂಚಮ್ಮಲ್ಲನಹಳ್ಳಿಗೆ ತಂದು ಸೇವೆ ಸಲ್ಲಿಸುತ್ತಾರೆ ಎಂಬ ಮಾಹಿತಿ ತಿಳಿಯಬಹುದು.

**ಗಣಪತಿ**

ಹುಲಿಕೆರೆ ಗ್ರಾಮದ ಕೆರೆಯ ಹಿಂಬದಿಯಲ್ಲಿರುವ ಕಲ್ಲೇಶ್ವರ ದೇವಾಲಯದ ಸಭಾಮಂಟಪದ ದೇವಕೋಷ್ಟಕದಲ್ಲಿರುವ ಈ ಶಿಲ್ಪವು ಕ್ರಿ. ಶ. ಸು ೧೨ನೇ ಶತಮಾನದ್ದಾಗಿದೆ. ಇದನ್ನು ಬಳಪದ ಶಿಲೆಯಲ್ಲಿ ಕೆತ್ತಲಾಗಿದ್ದು, ಇದು ೫೫ ಸೆಂ.ಮೀ ಎತ್ತರ ೩೨ ಸೆಂ.ಮೀ ಅಗಲ ಮತ್ತು ೧೮ ಸೆಂ.ಮೀ ದಪ್ಪವುಳ್ಳದಾಗಿದೆ. ಶಿಲ್ಪವು ಚತುರ್ಭುಜದಾರಿಯಾಗಿದ್ದು ಕರಂಡಮುಕುಟಧಾರಿಯಾಗಿದೆ. ಅಗಲವಾದ ಕಿವಿ, ಹಾವಿನ ಉದರಬಂಧ ಹಾಗೂ ಯಜ್ಞೋಪವಿತಗಳಿವೆ. ಮೇಲಿನ ಕೈಗಳಲ್ಲಿ ಅಂಕುಶ, ಪಾಶ, ಕೆಳಬಲಗೈಯನ್ನು ಕೆಳಗೆ ಭಾಗಿಸಿ ಮಡಚಿದ ರೀತಿಯಲ್ಲಿದ್ದು, ಎಡಗೈಯಲ್ಲಿ ಮೋದಕಪಾತ್ರೆ ಆ ಪಾತ್ರೆಯಲ್ಲಿರುವ ಸಿಹಿಯನ್ನು ಸೊಂಡಿಲಿನಿಂದ ತಿನ್ನುವಂತೆ ತೋರಿಸಲಾಗಿದೆ.

**ಭೈರವ**

ಹುಲಿಕೆರೆ ಗ್ರಾಮದ ಕಲ್ಲೇಶ್ವರ ದೇವಾಲಯದ ಸಭಾಮಂಟಪದಲ್ಲಿರುವ ಈ ಶಿಲ್ಪವು ೧೨ನೇ ಶತಮಾನದ್ದಾಗಿದೆ. ಇದನ್ನು ಕಪ್ಪುಶಿಲೆಯಲ್ಲಿ ಕೆತ್ತಲಾಗಿದೆ. ಇದು ೭೭ ಸೆಂ.ಮೀ ಎತ್ತರ ೪೨ ಸೆಂ.ಮೀ ಅಗಲ ಮತ್ತು ೧೦ ಸೆಂ.ಮೀ ದಪ್ಪವುಳ್ಳದ್ದಾಗಿದ್ದು ಇದು ಪೀಠದ ಮೇಲೆ ದ್ವಿಭಂಗಿಯಲ್ಲಿದೆ. ಇದು ನಗ್ನವಾಗಿದ್ದು, ಚತುರ್ಭುಜಧಾರಿಯಾಗಿದೆ. ಬಲಭಾಗದ ಮುಂದಿನ

ಕೈಯಲ್ಲಿ ಖಡ್ಗವನ್ನು, ಹಿಂದಿನ ಕೈಯಲ್ಲಿ ಡಮರು, ಎಡಭಾಗದ ಹಿಂದಿನ ಕೈಯಲ್ಲಿ ತ್ರೀಶೂಲ ಹಾಗೂ ಮುಂದಿನ ಕೈಯಲ್ಲಿ ಕಪಾಲವಿದ್ದು ಅದಕ್ಕೆ ರುಂಡವು ತಾಗಿಕೊಂಡಿದೆ. ಅದರ ಕೈಯ ಕೆಳಭಾಗದಲ್ಲಿ ನಾಯಿಯ ಶಿಲ್ಪವಿದೆ. ಶಿಲ್ಪವು ರಕ್ತಸಿಕ್ತ ಕಪಾಲವನ್ನು ನೆಕ್ಕುತ್ತಿರುವಂತೆ ಕೆತ್ತಲಾಗಿದೆ. ಜಟಾಮುಕುಟ ಭೈರವನ ಕಿವಿಯಲ್ಲಿ ಸರ್ಪ ಕುಂಡಲಗಳಿದ್ದು, ಜೊತೆಗೆ ಕಂಠಾಭರಣ, ಯಜ್ಞೋಪವೀತ, ರುಂಡಮಾಲೆ, ಕಟಿಬಂಧ ಹಾಗೂ ಕೈಕಡಗಗಳಿವೆ. ಕಾಲಿಗೆ ಕಾಲ್ಕಡಗ ಮತ್ತು ಪಾದರಕ್ಷೆಗಳನ್ನು ಧರಿಸಿದೆ.

**ಭೈರವ**

ಹುಲಿಕೆರೆ ಗ್ರಾಮದ ಕಲ್ಲೇಶ್ವರ ದೇವಾಲಯದ ಗರ್ಭಗೃಹದಲ್ಲಿರುವ ಭೈರವನ ಶಿಲ್ಪವು ಕಪ್ಪುಶಿಲೆಯಿಂದ ಕೂಡಿದೆ. ಈ ಶಿಲ್ಪವು ಒಂದೂವರೆ ಅಡಿ ಎತ್ತರವಾಗಿದ್ದ ಜಗತಿಯ ಮೇಲೆ ವೃತ್ತಾಕಾರದ ಪಾಣಿಪೀಠ ಹಾಗೂ ಪ್ರನಾಳ ಹೊಂದಿರುವುದನ್ನು ಕಾಣುತ್ತೇವೆ. ಇದರ ಮೇಲೆ ಭೈರವನ ಶಿಲ್ಪವು ನಿಂತಿರುವ ಭಂಗಿಯಲ್ಲಿದೆ. ಇದು ಸುಮಾರು ನಾಲ್ಕು ಅಡಿ ಎತ್ತರವಾಗಿದ್ದು, ಎರಡು ಅಡಿ ಅಗಲವಾಗಿದೆ. ಭೈರವನು ಚತುರ್ಭುಜಗಳನ್ನು ಹೊಂದಿದ್ದು ಬಲಭಾಗದ ಮುಂದಿನ ಕೈಯಲ್ಲಿ ಕತ್ತಿ ಹಾಗೂ ಹಿಂದಿನ ಕೈಯಲ್ಲಿ ತ್ರಿಶೂಲ ಮತ್ತು ಎಡಭಾಗದ ಹಿಂದಿನ ಕೈಯಲ್ಲಿ ಡಮರು ಮುಂದಿನ ಕೈಯಲ್ಲಿ ಕಪಾಲವಿದ್ದು, ಯೋಧನ ತಲೆಯಿದೆ. ತಲೆಯಿಂದ ಹೊರಸೂಸುವ ರಕ್ತವನ್ನು ಹೀರಲು ನಾಯಿ ಹಾತೊರೇಯುತ್ತದೆ. ಕಿರೀಟಮುಕುಟ, ಉರಿಯುತ್ತಿರುವ ಜ್ವಾಲೆಯಂತಹ ಕೇಶಾಲಂಕಾರ, ಕೊರಳಿನಲ್ಲಿ ರುದ್ರಾಕ್ಷಿಮಾಲೆ, ವಕ್ಷಬಂಧ, ಭುಜವಳಯ, ಬಾಹುವಳಿಯ, ಕಂಕಣಗಳನ್ನು ಧರಿಸಿರುವುದನ್ನು ಕಾಣುತ್ತೇವೆ ಹಾಗೂ ಉದ್ದನೇಯ ರುಂಡಮಾಲೆಯನ್ನು ಧರಿಸಿರುವನು. ನಂತರ ತೋಳಬಂಧಿ, ಹಣೆಯ ಹುಬ್ಬು ಸೂಕ್ಷ್ಮ ಕೆತ್ತನೆಯಿಂದ ಕಾಣುತ್ತದೆ. ಇಂತಹ ಶಿಲ್ಪವನ್ನು ಕಾನಾಹೊಸಹಳ್ಳಿ ಪರಿಸರದ ಗ್ರಾಮ ಹೋಡೆಂ ನಲ್ಲಿ ಸಹ ಕಾಣಬಹುದು.

**ಭೈರವ**

ಹೊಡೇಂ ಗ್ರಾಮದಿಂದ ತಾಯಕನಹಳ್ಳಿಗೆ ಹೋಗುವ ಮಾರ್ಗ ಮಧ್ಯದಲ್ಲಿ ಬಳಿಗೇರರ ಜಯಣ್ಣ ಮತ್ತು ಲಕ್ಷ್ಮಪ್ಪನವರ ಹೊಲದಲ್ಲಿನ ಬೋರೆದೇವರ ಗುಡಿಯ ಗರ್ಭಗೃಹದಲ್ಲಿ ಭೈರವನ ಮೂರ್ತಿಶಿಲ್ಪವಿದೆ. ಇದು ನಾಲ್ಕು ಅಡಿ ಎತ್ತರ ಮೂರು ಅಡಿ ಅಗಲವಿದ್ದು ಸ್ಥಳೀಯ ಕಣಶಿಲೆಯಿಂದ ಕೆತ್ತಲಾಗಿದೆ. ಇದನ್ನು ಬೋರವನೆಂದು ಕರೆಯುತ್ತಾರೆ. ಭೈರವನ ನಗ್ನಮೂರ್ತಿಯಿದ್ದು ಅಗಲವಾದ ಮುಖ, ಗಂಭೀರ ಮುಖಮುದ್ರೆ, ಕರ್ಣಕುಂಡಲ, ತ್ರೀಶೂಲ, ಡಮರುಗ, ಪಾಶ, ಪಾನಪಾತ್ರೆ ಮತ್ತು ಅಕ್ಷರಮಾಲೆಯಿದೆ. ಹೆಗಲಿನಿಂದ ಸೊಂಟದವರೆಗೆ

ಯಜ್ಞೋಪವೀತ, ಕಟಿಸೂತ್ರ, ಮಾಲ್ಯಗಳು ಕಂಡುಬರುತ್ತವಲ್ಲದೆ, ಜಟಾಬಂಧದಲ್ಲಿ ಜಟಾಮಂಡಲಗಳಿವೆ. ಬ್ರಹ್ಮ, ತ್ರಿಮೂರ್ತಿಗಳಲ್ಲಿ ತಾನೇ ಶ್ರೇಷ್ಠನೆಂದು ಹೆಮ್ಮೆಗೊಂಡಾಗ ಶಿವನು ಭೈರವನನ್ನು ಸೃಜಿಸಿ ಬಿಡಲು ಅವನು ಬ್ರಹ್ಮನ ಐದನೇ ತಲೆಯನ್ನು ಕತ್ತರಿಸಲು ಅದು ಅವನ ಕೈಗಂಟಿಕೊಂಡಿತು. ಭೈರವನು ಕಾಪಾಲಿಕನಾಗಿ ತಿರುಗುತ್ತ ಕಾಶೀ ಕ್ಷೇತ್ರಕ್ಕೆ ಬರಲು ಆ ಕಪಾಲವು ಆತನ ಕೈಯಿಂದ ಜಾರಿತು ಎಂದು ತಿಳಿದು ಬರುತ್ತದೆ.

ಭೈರವನ ವಿಗ್ರಹದಲ್ಲಿ ಕಮಂಡಲ, ಧನುಸ್ಸು, ಬಾಣ, ಕಪಾಲ, ವಜ್ರಾಯುಧ, ಶತಘ್ನಿ ಖಡ್ಗ, ಪಟ್ಟಿಶ, ಶೊಲಸ್ರುವ ಧರಿಸಿದ್ದಾನೆ. ದಕ್ಷಿಣಕ್ಕೆ ಅಭಿಮುಖವಾದ ಭಾಗ ನಗ್ನ ಸ್ಥಿತಿಯಲ್ಲಿದೆ. ಇದೇ ಗ್ರಾಮದ ಯರ್ರಿಬೋರಯ್ಯನವರು ಇದರ ಪೂಜಾರಿಗಳಾಗಿದ್ದಾರೆ. ಈ ಮೂರ್ತಿಶಿಲ್ಪವು ಗಂಗರ ಕಾಲದ ಭೈರವ ಶಿಲ್ಪವನ್ನು ಹೋಲುತ್ತದೆ.[೨೬]

**ಸೂರ್ಯ**

ಹೂಡೇಂನ ಬೋರೆದೇವರ ಗುಡಿಯ ಮುಂಭಾಗದಲ್ಲಿ ಈ ಶಿಲ್ಪವಿದೆ, ಸೂರ್ಯನಿಗೆ ಆದಿತ್ಯ, ರವಿ, ಭಾಸ್ಕರ, ವೈವಸ್ವತನೆಂದು ಪುರಾಣದಲ್ಲಿ ಕರೆಯುವರು. ಈ ಶಿಲ್ಪವು ಮೂರು ಅಡಿ ಎತ್ತರ ಒಂದುವರೆ ಅಡಿ ಅಗಲವಿದ್ದು ಕಪ್ಪು ಶಿಲೆಯಿಂದ ನಿರ್ಮಿಸಿದ್ದಾರೆ. ನಿಂತಿರುವ ಭಂಗಿಯಲ್ಲಿರುವ ಈ ಶಿಲ್ಪವು ಪೂರ್ವಾಭಿಮುಖವಾಗಿದೆ. ಇದರ ವೈಶಿಷ್ಟ್ಯ ವೆಂದರೆ ಪ್ರಸನ್ನ ಮೊಗದ ಈ ಶಿಲ್ಪಕ್ಕೆ ಉದ್ದನೆಯ ಕಿರೀಟ, ಮಕರ ಕುಂಡಲ, ಕತ್ತಿನಲ್ಲಿ ಚಿಕ್ಕದಾದ ಉದ್ದನೆಯ ಗಂಟೆಗಳ ಸರ, ಯಜ್ಞೋಪವೀತಗಳಿವೆ. ಮುಂಗೈಗಳಲ್ಲಿ ದಪ್ಪವಾದ ಕಡಗಗಳಿದ್ದು ಉದಬಂಧವೂ ಇದೆ. ಎರಡು ಕೈಗಳನ್ನು ಪಕ್ಕಕ್ಕೆ ತಂದು ಕಮಲದ ಮೊಗ್ಗುಗಳನ್ನು ಹೆಗಲ ಮೇಲೆ ಇರಿಸಿಕೊಂಡಂತೆ ಕೆತ್ತಲಾಗಿದೆ. ನಡುಬಂಧದಿಂದ ಎರಡೂ ಕಡೆ ಬಟ್ಟೆ ಇಳಿಬಿದ್ದಿದ್ದು ಅದರ ಮಧ್ಯಭಾಗವನ್ನು ಎತ್ತಿ ಸಿಕ್ಕಿಸಲಾಗಿದೆ.

ಆಶ್ಚರ್ಯವೆಂದರೆ ಶಿಲ್ಪದ ಹಿಂಭಾಗದಲ್ಲಿ ನವಿಲಿನ ಚಿತ್ರವನ್ನು ಕೆತ್ತಿರುವುದು, ಇದನ್ನು ಸ್ಕಂದ ಅಥವಾ ಕಾರ್ತಿಕೇಯನೆಂದು ಊಹಿಸಲಾಗಿದೆ. ಸಾಮಾನ್ಯವಾಗಿ ಕುದುರೆ ಚಿತ್ರವನ್ನು ಸೂರ್ಯ ಶಿಲ್ಪಗಳಲ್ಲಿ ಕೆತ್ತಿರುವುದು ನೋಡುತ್ತೇವೆ. ಅಂದರೆ ಇದು ಈ ಭಾಗದಲ್ಲಿದ್ದ ಸೂರ್ಯಾರಾಧನೆ ಬಗ್ಗೆ ದೃಢಪಡಿಸುತ್ತದೆ. ಗಂಗರ ಕಾಲದಲ್ಲಿ ಈ ತರದ ಸೂರ್ಯಶಿಲ್ಪಗಳನ್ನು ಕಂಪಲಾಪುರ, ಗಂಗವಾಡಿ, ತಲಕಾಡು, ಕಮ್ಮಸಂದ್ರ ಮುಂತಾದವುಗಳಲ್ಲಿ ಕಾಣಬಹುದು. ಹೊಡೇಂ ಗ್ರಾಮದಲ್ಲಿ ಸೂರ, ಸೂರಪ್ಪ, ಸೂರಯ್ಯ, ಸೂರಮ್ಮನೆಂಬ ಹೆಸರುಗಳನ್ನು ಈ ಹಿನ್ನೆಲೆಯಲ್ಲಿ ಇಟ್ಟುಕೊಂಡಿರಬೇಕು.

**ವೈಷ್ಣವ ಮೂರ್ತಿಶಿಲ್ಪಗಳು**

ಹಿಂದೂ ಧರ್ಮದ ಮೂರ್ತಿಗಳಲ್ಲಿ ವಿಷ್ಣು ಎರಡನೆಯವನಾಗಿದ್ದು, ಬ್ರಹ್ಮ ಸೃಷ್ಟಿಸಿದ ವಸ್ತುವನ್ನು ರಕ್ಷಿಸುವುದು ಕರ್ತವ್ಯ. ವೈಷ್ಣವ ಧರ್ಮದಲ್ಲಿ ಭಾಗವತ ಪಂಥವೂ ಒಂದು ಪ್ರಮುಖವಾಗಿದ್ದು, ವೈಷ್ಣವ ಕುಲದ ಪಂಚವೀರರನ್ನು ವಾಸುದೇವ ಪ್ರಜ್ಯುಮ್ನ ಸಾಂಬ, ಅನಿರುದ್ಧ ಮೂರ್ತಿರೂಪದಿಂದ ಆರಾಧಿಸುತ್ತಿದ್ದ ಅಂಶವು ಪುರಾತತ್ವ ಕುರುಹುಗಳಿಂದ ಸ್ಪಷ್ಟವಾಗುತ್ತದೆ.[೨] ವಿಷ್ಣುವಿನ ಶಿಲ್ಪಗಳು ಸಾಮಾನ್ಯವಾಗಿ ಸಮಭಂಗಿಯಲ್ಲಿದ್ದು, ಚತುರ್ಭುಜಗಳನ್ನು ಹೊಂದಿದ್ದು, ಶಂಖ, ಚಕ್ರ, ಪದ್ಮ, ಗದೆ, ಆಯುಧಗಳಿರುತ್ತವೆ. ಕಿರೀಟಮುಕುಟ, ಹಾರ, ಕಂಠಸರ, ಉದರಬಂಧ, ಉದ್ದನೆಯ ವೈಜಯಂತಿಮಾಲೆ, ಕೇಯುರ, ಕಂಕಣ, ಪಾದರಸ ಮುಂತಾದ ಆಭರಣಗಳಿರುತ್ತವೆ. ವಿಷ್ಣು ಶಿಲ್ಪಗಳನ್ನು ಮೂರು ಭಂಗಿಯಲ್ಲಿ ಖಂಡರಿಸಲಾಗಿದೆ. ಸ್ಥಾನಿಕ, ಆಸೀನ, ಶಯನ, ದೇವಿ ಸಹಿತ ಮೂರ್ತಿಗಳು ದೊರೆಯುತ್ತವೆ.

**ವಿಷ್ಣು**

ಕಾನಾಹೊಸಹಳ್ಳಿ ಹೋಬಳಿ ವ್ಯಾಪ್ತಿಯಲ್ಲಿ ಬರುವ ಹುಡೇಂ ಗ್ರಾಮದಿಂದ ತಾಯಕನಹಳ್ಳಿಗೆ ಹೋಗುವ ಮಾರ್ಗಮಧ್ಯದಲ್ಲಿ ಬಳಿಗೇರರ ಜಯಣ್ಣ ಮತ್ತು ಲಕ್ಷ್ಮಪ್ಪನವರ ಜಮೀನಿನಲ್ಲಿ ಇರುವ ಬೋರೆದೇವರ ದೇವಾಲಯದ ಮುಂಭಾಗದಲ್ಲಿರುವ ಈ ಶಿಲ್ಪವು ಕಪ್ಪುಕಣ ಶಿಲೆಯಲ್ಲಿ ಕೆತ್ತಲಾಗಿದ್ದು, ಕ್ರಿ.ಶ.ಸು. ೧೨ನೇ ಶತಮಾನದ್ದಾಗಿದೆ. ಈ ಶಿಲ್ಪವು ೮೦ ಸೆಂ.ಮೀ ಎತ್ತರ ೫೦ ಸೆಂ.ಮೀ ಅಗಲ ಮತ್ತು ೧೨ ಸೆಂ.ಮೀ ದಪ್ಪವುಳ್ಳದ್ದಾಗಿದೆ. ಇದು ಸಮಭಂಗಿಯಲ್ಲಿ ನಿಂತಿದ್ದು, ಚತುರ್ಭುಜಧಾರಿಯಾಗಿದೆ. ಮೇಲಿನ ಬಲಗೈಯು ಅಭಯಹಸ್ತ, ಮೇಲಿನ ಎಡಗೈಯಲ್ಲಿ ಶಂಖ ಮತ್ತು ಕೆಳಗಿನ ಬಲಗೈಯಲ್ಲಿ ಚಕ್ರ, ಕೆಳಗಿನ ಎಡಗೈಯಲ್ಲಿ ಗದೆವನ್ನು ಹಿಡಿದಿದೆ. ಕಿವಿಯಲ್ಲಿ ಕುಂಡಲಗಳಿವೆ. ಕೊರಳಲ್ಲಿ ಕಂಠಾಭರಣ, ಹಾಗೂ ವಿವಿಧ ಬಗೆಯ ಹಾರಗಳಿವೆ. ಹಾಗೇ ಉದರಬಂಧ, ಯಜ್ಞೋಪವೀತ ಮೊಣಕಾಲದವರೆಗೆ ಇಳಿಬಿದ್ದ ಅಲಂಕಾರಯುಕ್ತ ಉಪವೀತ ಮತ್ತು ವೈಜಯಂತಿ ಮಾಲೆಯಿದೆ. ಕೈಗಳಲ್ಲಿ ಭುಜಕೀರ್ತಿ, ಕೇಯೂರ, ಕಡಗಗಳಿವೆ, ನಡುವನ್ನು ಬಿಗಿದು ಮುಂಭಾಗದಲ್ಲಿ ಗಂಟು ಬಟ್ಟೆಯನ್ನು ಸೇರಿಸುವಂತೆ ಮಧ್ಯ ಅರ್ಧಚಂದ್ರಾಕಾರದ ಇಳಿಬಟ್ಟೆಯಿದೆ. ಈ ಶಿಲ್ಪವು ವರದರಾಜ ಶಿಲ್ಪದ ಪ್ರತಿಮಾಲಕ್ಷಣವನ್ನು ಹೋಲುತ್ತದೆ.

**ವಿಷ್ಣು**

ಹುಲಿಕೆರೆ ಗ್ರಾಮದ ಕಲ್ಲೇಶ್ವರ ದೇವಾಲಯದ ಗರ್ಭಗೃಹದಲ್ಲಿರುವ ವಿಷ್ಣು ಶಿಲ್ಪವು ಕಪ್ಪು ಶಿಲೆಯಿಂದ ಕೂಡಿದೆ. ಈ ಶಿಲ್ಪವು ಎರಡು ಅಡಿ ಎತ್ತರದ ಜಗತಿಯು ಇದ್ದು, ಇದರ ಮೇಲೆ

ಸುಮಾರು ಒಂದುವರೆ ಅಡಿ ಎತ್ತರದ ಪಾಣಿಪೀಠವಿದೆ. ಇದರ ಮೇಲೆ ವಿಷ್ಣುಶಿಲ್ಪವು ನಿಂತಿರುವ ಭಂಗಿಯಲ್ಲಿದೆ. ಚತುರ್ಭುಜಧಾರಿಯಾಗಿದೆ. ಮೇಲಿನ ಬಲಗೈಯಲ್ಲಿ ಪದ್ಮ ಎಡಗೈಯಲ್ಲಿ ಶಂಕು ಉಳಿದೆರಡು ಕೈಗಳು ಅಭಯ ಮತ್ತು ವರದ ಮುದ್ರೆಗಳಲ್ಲಿವೆ. ಕಿರೀಟ ಮುಕುಟಧಾರಿಯಾದ ಈ ಮೂರ್ತಿಗೆ ಕಿವಿಯಲ್ಲಿ ಕುಂಡಲಗಳಿವೆ. ಕೊರಳಲ್ಲಿ ಕಂಠಾಭರಣ ಹಾಗೂ ವಿವಿಧ ಬಗೆಯ ಹಾರಗಳಿವೆ. ನಂತರ ನಡುವನ್ನು ಬಿಗಿದು ಮುಂಭಾಗದಲ್ಲಿ ಗಂಟು ಬಟ್ಟೆಯನ್ನು ಸೇರಿಸುವಂತೆ ಮಧ್ಯ ಅರ್ಧಚಂದ್ರಾಕಾರದ ಇಳಿಬಟ್ಟೆಯಿದೆ. ಕಾಲಿನಲ್ಲಿ ದಪ್ಪನೆಯ ಕಡಗಗಳಿವೆ. ಈ ಶಿಲ್ಪದ ಸುತ್ತಲೂ ಹೂಬಳ್ಳಿಗಳ ಅಲಂಕರಣವಿದೆ. ವಿಷ್ಣು ಶಿಲ್ಪದ ಮುಖಭಾಗವು ಸೌಮ್ಯರೂಪದಲ್ಲಿದೆ.

**ಕೇಶವ**

ಹುಲಿಕೆರೆ ಗ್ರಾಮದ ಕಲ್ಲೇಶ್ವರ ದೇವಾಲಯದ ಸಭಾಮಂಟಪದಲ್ಲಿರುವ ಈ ಶಿಲ್ಪವು ಕ್ರಿ.ಶ.ಸು. ೧೨ನೇ ಶತಮಾನದ್ದಾಗಿದೆ. ಇದನ್ನು ಬಳಪದ ಶಿಲೆಯಲ್ಲಿ ಕೆತ್ತಲಾಗಿದ್ದು, ಇದು ೮೫ ಸೆಂ.ಮೀ ಎತ್ತರ ೫೦ ಸೆಂ.ಮೀ ಅಗಲ ಹಾಗೂ ೨೦ ಸೆಂ.ಮೀ ದಪ್ಪವುಳ್ಳದ್ದಾಗಿದೆ. ಸಮಭಂಗಿಯಲ್ಲಿ ಸ್ಥಾನಿಕರಾಗಿರುವ ಮೂರ್ತಿಯು ಚತುರ್ಭುಜಧಾರಿಯಾಗಿದೆ. ಮೇಲಿನ ಬಲಗೈಯಲ್ಲಿ ಶಂಖ ಎಡಗೈಯಲ್ಲಿ ಚಕ್ರ ಮತ್ತು ಕೆಳಗಿನ ಬಲಗೈಯಲ್ಲಿ ಗದೇ, ಎಡಗೈಯಲ್ಲಿ ಪದ್ಮ ಹಿಡಿದಿದೆ. ಭುಜಕೀರ್ತಿ, ಕೊರಳಲ್ಲಿ ಕಂಠಾಭರಣ, ಹಾರ, ಕೇಯೂರ, ಉಪವೀತ, ಕೈಯಲ್ಲಿ ಕಡಕ, ಬಳೆ, ತೋಳಬಂದಿ, ಉಂಗುರ ಹಾಗೂ ವಿವಿಧ ಬಗೆಯ ಮಣಿಸರಗಳನ್ನು ಧರಿಸಿದ್ದಾನೆ. ಸಾದ ಪಟ್ಟಿಕೆಯ ಪ್ರಭಾವಳಿಯಿದೆ. ಈ ಮೂರ್ತಿಯ ಎಡ ಬಲ ಮತ್ತು ಪಾದದ ಭಾಗವು ಭಗ್ನವಾಗಿದೆ.

**ಆಂಜನೇಯ**

ಕಾನಾಹೊಸಹಳ್ಳಿ ಹೋಬಳಿ ವ್ಯಾಪ್ತಿಯಲ್ಲಿ ಬರುವ ಕೆಂಚಮ್ಮಲ್ಲನಹಳ್ಳಿ ಗ್ರಾಮದ ಆಂಜನೇಯ ದೇವಾಲಯದಲ್ಲಿ ಈ ಶಿಲ್ಪವು ಕಪ್ಪುಶಿಲೆಯಿಂದ ಕೆತ್ತಲ್ಪಟ್ಟಿದೆ. ಇದು ಉಬ್ಬು ಶಿಲ್ಪವಾಗಿದ್ದು, ಇದರ ಎತ್ತರ ೮.೫ ಅಡಿ ಹಾಗೂ ೪.೧ ಅಡಿ ಅಗಲವಾಗಿದೆ. ಈ ಶಿಲ್ಪವು ಮುಖವನ್ನು ಎಡಭಾಗಕ್ಕೆ ತಿರುವಿದಂತೆ ಕೆತ್ತಲಾಗಿದೆ. ಬಾಲವು ತಲೆಯ ಮೇಲಿನ ಭಾಗದಿಂದ ಎಡಗಡೆಯ ತೋಳಿನ ಹತ್ತಿರ ಬಂದಿದೆ. ಬಲಗೈಯನ್ನು ಮೇಲೆತ್ತಿದ್ದು, ಅಭಯ ಮುದ್ರೆಯಲ್ಲಿದೆ. ಎಡಗೈಯಲ್ಲಿ ಸೌಗಂಧಿಕಾ ಪುಷ್ಪವನ್ನು ಹಿಡಿದುಕೊಂಡಿದೆ. ಆಂಜನೇಯನ ಕೊರಳಲ್ಲಿ ಪದಕವಿರುವ ಹಾರ, ಹಿಂಭಾಗದಲ್ಲಿ ಜುಟ್ಟುಕಟ್ಟಿದ್ದು, ಬಲಕಿವಿಯಲ್ಲಿ ರತ್ನಕುಂಡಲ, ಕೈತೋಳು, ಮುಂಗೈ ಹಾಗೂ ಕಾಲುಗಳಲ್ಲಿ ಕಡಗಾಭರಣಗಳನ್ನು ಧರಿಸಿದೆ. ಸೊಂಟದ ಕೆಳಭಾಗದಲ್ಲಿ

ಚಿಕ್ಕದಾದ ಬಟ್ಟೆಯಿಂದ ಕಚ್ಚೆಯನ್ನು ಹಾಕಿದಂತಿದೆ. ಈ ಶಿಲ್ಪದ ಕಾಲುಗಳು ಎಡಕ್ಕೆ ಭಾಗಿಸಿಕೊಂಡಿರುವುದು, ಎರಡೂ ಕಾಲುಗಳ ಮಧ್ಯ ಅಸುರನಾದ ಅಕ್ಷಯ ಕುಮಾರನನ್ನು ಕಾಲ ಅಡಿಯಲ್ಲಿ ತೋರಿಸಲಾಗಿದೆ. ಎಡಗೈಯಲ್ಲಿ ದುಂಡಾದ ಖೇಟಕವನ್ನು ಹಾಗೂ ಬಲಗೈಯಲ್ಲಿ ಖಡ್ಗವನ್ನು ಹಿಡಿದುಕೊಂಡಿರುವುದು.

**ಆಂಜನೇಯ**

ಕಾನಾಹೊಸಹಳ್ಳಿ ಗ್ರಾಮದ ದ್ವಾರಬಾಗಿಲಿನ ಪಕ್ಕದಲ್ಲಿರುವ ಆಂಜನೇಯ ದೇವಾಲಯದ ಗರ್ಭಗೃಹದಲ್ಲಿ ಈ ಮೂರ್ತಿಶಿಲ್ಪವು ಸಮಭಂಗಿಯಲ್ಲಿದೆ. ಸುಮಾರು ಐದು ಅಡಿ ಎತ್ತರ ಮೂರು ಅಡಿ ಅಗಲವಾಗಿದ್ದು, ಮುಖವನ್ನು ಎಡಕ್ಕೆ ತಿರುಗಿಸಿದಂತೆ ಕಾಣುತ್ತದೆ. ಬಲಗೈಯನ್ನು ಮೇಲೆತ್ತಿದ್ದು, ಅಭಯ ಮುದ್ರಯಲ್ಲಿದ್ದು, ಎಡಗೈಯಲ್ಲಿ ಗದೆಯನ್ನು ಹಿಡಿದಿರುವ ಆಗಿದೆ. ಬಾಲವು ಆಂಜನೇಯನ ಹಿಂಬದಿ ಮೇಲಿನಿಂದ ಮುಂದೆ ಬಾಗಿದ್ದ ಸುರುಳಿಯಾಕಾರದಲ್ಲಿದೆ. ಕೊರಳಿನಲ್ಲಿ ವಿವಿಧ ಹಾರಗಳಿವೆ. ಕರ್ಣಾಭರಣಗಳಿವೆ. ಕಟಿಬಂಧವಿದೆ. ಭುಜಗಳಲ್ಲಿ ಆಭರಣಗಳಿವೆ. ಕೈ ತೋಳು ಮುಂಗೈ ಕಾಲುಗಳಲ್ಲಿ ಕಡಗಾಭರಣಗಳನ್ನು ಧರಿಸಿದೆ. ಬಾಲದ ಕೊನೆಯಲ್ಲಿ ಘಂಟೆ ಇರುವುದರಿಂದ ವಿಜಯನಗರ ಕಾಲದ ಮೂರ್ತಿಶಿಲ್ಪ ಎಂದು ಗುರುತಿಸಬಹುದಾಗಿದೆ. ಕೆಳಗಿನ ಭಾಗವು ಸ್ವಲ್ಪ ತೃಟಿತವಾಗಿದೆ. ಕಾನಾಹೊಸಹಳ್ಳಿ ಸ್ಥಳಿಯರು ಪ್ರತಿ ಶನಿವಾರ ವಿಶೇಷ ಆಚರಣೆಗಳನ್ನು ನಡೆಸುತ್ತಾರೆ.

**ಆಂಜನೇಯಶಿಲ್ಪ**

ಪೂಜಾರಹಳ್ಳಿ ಗ್ರಾಮದ ಆಂಜನೇಯ ದೇವಾಲಯದ ಗರ್ಭಗೃಹದಲ್ಲಿರುವ ಈ ಶಿಲ್ಪವು ೧೪ ಮತ್ತು ೧೫ನೇ ಶತಮಾನದ್ದಾಗಿದ್ದು ಶೈಲಿಯ ದೃಷ್ಟಿಯಿಂದ ವಿಜಯನಗರ ಕಾಲಕ್ಕೆ ಸಂಬಂಧಿಸಿದ ಇದನ್ನು ಕಣಶಿಲೆಯಲ್ಲಿ ಕೆತ್ತಲಾಗಿದ್ದು, ಇದರ ಉದ್ದ ೬.೫ ಅಡಿ ಮತ್ತು ೪.೮ ಅಡಿ ಅಗಲವನ್ನು ಹೊಂದಿದೆ. ಈ ಶಿಲ್ಪವು ಬಲಗೈಯನ್ನು ಮೇಲೆತ್ತಿದ್ದು, ಅಭಯ ಮುದ್ರೆಯಲ್ಲಿದೆ. ಎಡಗೈಯಲ್ಲಿ ಸೌಗಂಧಿಕ ಪುಷ್ಪವನ್ನು ಹಿಡಿದುಕೊಂಡಿದೆ. ಬಾಲವು ಆಂಜನೇಯನ ಹಿಂಬದಿ ಮೇಲಿನಿಂದ ಮುಂದೆ ಬಾಗಿದ್ದು, ಸುರುಳಿಯಾಕಾರವಾಗಿದೆ. ಕೊನೆಯಲ್ಲಿ ಘಂಟೆಯ ಕೆತ್ತನೆಯನ್ನು ಕಾಣುತ್ತೇವೆ. ಆಂಜನೇಯನ ಕೊರಳಲ್ಲಿ ವಿವಿಧ ಆಭರಣಗಳಿವೆ. ಕಿವಿಯಲ್ಲಿ ಕರ್ಣಾಂಭರಗಳಿವೆ ಕೈಯಲ್ಲಿ ತೋಳಬಂದಿ ಮತ್ತು ಕಟಿಬಂದಿಗಳಿವೆ. ಕಾಲುಗಳಲ್ಲಿ ಕಡಗಾಭರಣವನ್ನು ಧರಿಸಿದೆ. ಎರಡು ಕಾಲುಗಳ ಮಧ್ಯ ಅಕ್ಷಯಕುಮಾರನು ಇದ್ದು ಬಲಗೈ ಪರಶುವಿನಾಕಾರದ ಆಯುಧವನ್ನು ಹಿಡಿದಿದ್ದಾನೆ. ಈ ಶಿಲ್ಪದ ಮೇಲಿನ ಭಾಗದಲ್ಲಿ ಸೂರ್ಯ ಚಂದ್ರರ ಕೆತ್ತನೆಗಳಿವೆ. ಆಧುನಿಕವಾಗಿ

ಈ ಶಿಲ್ಪದ ಮುಂಭಾಗದಲ್ಲಿ ತಾಮ್ರದ ಅಲಂಕಾರ ಪಟ್ಟಿಕೆಯನ್ನು ನಿರ್ಮಿಸಿದ್ದಾರೆ. ಈ ಆಂಜನೇಯ ಶಿಲ್ಪವನ್ನು ವ್ಯಾಸ ಪ್ರತಿಷ್ಠಿತ ಆಂಜನೇಯ ವೆಂದು ಕರೆಯಲಾಗಿದೆ.

**ಜೈನ ಮೂರ್ತಿಶಿಲ್ಪಗಳು**

ಜೈನಧರ್ಮವು ಅನೇಕ ಮಾರ್ಪಾಡುಗಳಿಗೆ ಒಳಗಾಗಿದ್ದರೂ ಜೈನ ಮೂರ್ತಿ ಶಿಲ್ಪದಲ್ಲಿ ಮಾತ್ರ ಯಾವುದೇ ರೀತಿಯ ವ್ಯತ್ಯಾಸವನ್ನು ಅಳವಡಿಸಿಕೊಳ್ಳಲಿಲ್ಲ. ಪ್ರಾಚೀನ ಕಾಲದಲ್ಲಿ ಪ್ರಚಲಿತವಿದ್ದ ಮೂರ್ತಿಶಿಲ್ಪದ ಕೆತ್ತನೆಯ ಶೈಲಿಯಲ್ಲಿ ಎರಡು ವಿಧದಲ್ಲಿ ಜೈನ ಶಿಲ್ಪಗಳನ್ನು ಕೆತ್ತಲಾಗುತ್ತಿತ್ತು. ಅವುಗಳೆಂದರೆ ಪದ್ಮಾಸನ ಭಂಗಿ ಮತ್ತು ಕಾಯೋತ್ಸಾರ್ಗಭಂಗಿಯಲ್ಲಿ ಕೆತ್ತನೆ ಮಾಡಿದ್ದಾರೆ. ಈ ರೀತಿಯಾಗಿ ಜೈನ ತೀರ್ಥಂಕರ ಅಥವಾ ಜಿನ ಮೂರ್ತಿಗಳನ್ನು ಕಾಣಬಹುದು. ತೀರ್ಥಂಕರರನ್ನು ಜಿನ ಎಂತಲೂ ಕರೆಯುತ್ತಾರೆ. ಜಿನ ಎಂದರೆ ಗೆದ್ದವನ್ನು ಸಂಸಾರವೆಂಬ ನೌಕೆಯಿಂದ ಒಳಗಿನ ರಾಗಭಾವಗಳನ್ನು ಗೆದ್ದವನೇ ಜಿನ. ವೀತರಾಗ ಅರಿಹಂತ ಎಂತಲೂ ಕರೆಯಲಾಗುತ್ತದೆ.[೨೮] ಕರ್ನಾಟಕದಲ್ಲಿ ಹಲವಾರು ಜೈನ ಕೇದ್ರಗಳಲ್ಲಿ ಜಿನ ಮೂರ್ತಿಶಿಲ್ಪಗಳನ್ನು ಬಸದಿಗಳಲ್ಲಿ ಪ್ರತಿಷ್ಠಾಪಿಸಲಾಗಿದೆ. ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಸಹ ಜೈನ ಶಿಲ್ಪಗಳನ್ನು ಕಾಣಬಹುದು.

**ಜಿನ ಮೂರ್ತಿ**

ಹುಡೇಂ ಗ್ರಾಮದ ಬೋರೆದೇವರ ಗುಡಿಯ ಮುಂಭಾಗದಲ್ಲಿ ಈ ಮೂರ್ತಿಯನ್ನು ಕಾಣಬಹುದು. ಜಿನ, ಪಾರ್ಶ್ವನಾಥನೆಂದು ಹೇಳಲಾಗುತ್ತದೆ. ಕುಳಿತಿರುವ ಭಂಗಿಯಲ್ಲಿ ಈ ಶಿಲ್ಪವು ಕಪ್ಪುಶಿಲೆಯಿಂದ ನಿರ್ಮಿಸಲಾಗಿದೆ. ಇದೇ ರೀತಿಯಾದ ಶಿಲ್ಪವೊಂದು ಗುಡೇಕೋಟೆಯಲ್ಲಿ ಕಾಣಬಹುದು. ಕುಳಿತಿರುವ ಭಂಗಿಯನ್ನು ನೋಡಿದರೆ ಪಾಣಿಪೀಠದ ಮೇಲೆ ಜಿನನಂತೆ ಕಾಣಬರುತ್ತದೆ. ಆದರೂ ಪಾರ್ಶ್ವನಾಥನೆಂದು ಹೇಳಲು ಶಿಲ್ಪ ಶಿಥಿಲಗೊಂಡಿದೆ. ಜಿನಮೂರ್ತಿ ಎಂದು ಕರೆಯಲು ಮುಚಲಿಂದ, ಬುದ್ಧನಮೂರ್ತಿ, ಪಾರ್ಶ್ವನಾಥ ತೀರ್ಥಂಕರನ ಮೂರ್ತಿಗಳಲ್ಲಿಯೂ ತಲೆಯ ಮೇಲೆ ಏಳು ಹೆಡೆಯ ಸರ್ಪವಿರುತ್ತದೆ. ಈ ಶಿಲ್ಪದಲ್ಲಿ ಹಾವನ್ನು ದೇವತಾ ಕಲ್ಪನೆಗೆ ಅಳವಡಿಸಿಕೊಂಡಿರುವುದು ಸೈಂಧವ ಸಂಸ್ಕೃತಿಯ ಕಾಲದಿಂದಲೂ ಬಂದಿದೆ ಎನ್ನಲಾಗಿದೆ. ದಕ್ಷಿಣ ಭಾರತದಲ್ಲಿ ಇಂಥ ಶಿಲ್ಪಗಳಿರುವುದು ಅಪರೂಪ. ಜೈನಧರ್ಮದ ಶಾಖೆಗಳು ಈ ಭಾಗದಲ್ಲಿದ್ದವು ಎಂಬುದಕ್ಕೆ ಇದು ಒಂದು ಕಾರಣವಾಗುತ್ತದೆ.

**ಶಾಕ್ತ ಶಿಲ್ಪಗಳು**

ಭಾರತವು ವೈವಿಧ್ಯಮಯವಾದ ಸಂಸ್ಕೃತಿಯನ್ನು ಹೊಂದಿರುವ ದೇಶವಾಗಿದ್ದು ಸ್ತ್ರೀಗೆ ವಿಶೇಷ ಸ್ಥಾನವಿದೆ, ಭಾರತದ ಇತಿಹಾಸ ಆರಂಭದ ಕಾಲವನ್ನು ನೋಡಿದರೆ ಒಂದರ್ಥದಲ್ಲಿ

ಮಾತೃದೇವತಾ ಆರಾಧನೆಯ ಸಮಾಜವನ್ನು ನೋಡಬಹುದು. ಮಾತೃ ದೇವತಾರಾಧನೆ ಇಂದಿಗೂ ಸಹ ಪ್ರಚಲಿತದಲ್ಲಿರುವುದನ್ನು ನೋಡಬಹುದು, ಶಾಕ್ತರ ನಂಬಿಕೆ ಪ್ರಕಾರ ಎಲ್ಲಾ ಸ್ತ್ರೀಯರು ದೇವತಾ ಸ್ವರೂಪವಿದ್ದು, ನೂರಾರು ಮಾತೃ ದೇವತೆಯರ ಕಲ್ಪನೆಗೆ ಎಡೆ ಮಾಡಿಕೊಟ್ಟಿದೆ. ಮಾತೃ ಪರಂಪರೆಯಲ್ಲಿ ಪಾರ್ವತಿ ಶಿವನ ಹಿನ್ನಲೆಯಲ್ಲಿ ಪೂಜೆಗೊಳಪಟ್ಟರೆ ಲಕ್ಷ್ಮೀ ವಿಷ್ಣುವಿನ ಜೊತೆ ಸರಸ್ವತಿ ಬ್ರಹ್ಮನೊಂದಿಗೆ ಗುರುತಿಸಲ್ಪಟ್ಟ ಆರಾಧನೆಗೊಳ್ಳುತ್ತಾರೆ.[೨೯] ಆದ್ದರಿಂದ ಭಾರತದ ಶಿಲ್ಪ ಕಲೆಯ ಇತಿಹಾಸವನ್ನು ನೋಡಿದರೆ ಹಲವು ರೀತಿಯ ಶಕ್ತಿದೇವತೆಯ ಶಿಲ್ಪಗಳು ಕಂಡುಬರುವುದನ್ನು ನೋಡಬಹುದು.

**ಗಜಲಕ್ಷ್ಮೀ**

ಈ ಶಿಲ್ಪವು ಕೆಂಚಮಲ್ಲನಹಳ್ಳಿ ಗ್ರಾಮದ ಆಂಜನೇಯ ದೇವಾಲಯದ ಮುಂಭಾಗದಲ್ಲಿರುವ ದ್ವೀಪಸ್ತಂಭದ ಕಟ್ಟೆಯ ಮೇಲೆ ಇದೆ. ಕುಳಿತ ಭಂಗಿಯಲ್ಲಿರುವ ಲಕ್ಷ್ಮೀಯ ಕೊರಳಲ್ಲಿ ಸರಮಾಲೆ ಕಿವಿಯಲ್ಲಿ ಕಿವಿ ಓಲೆ ಮತ್ತು ತುರುಬನ್ನು ಕಟ್ಟಿರುವುದು ಕಂಡುಬರುತ್ತದೆ. ಇದರ ಎಡ, ಬಲ ಭಾಗದಲ್ಲಿ ಆನೆಗಳಿದ್ದು, ನಿಂತಿರುವ ಭಂಗಿಯ ಗಜವು ಮುಂದಿನ ಮುಂಗಾಲನ್ನು ಮಡಚಿದಂತೆ ಕಾಣುತ್ತಿವೆ. ಈ ಗಜಲಕ್ಷ್ಮೀಶಿಲ್ಪ ೩೮ ಸೆಂ.ಮೀ ಅಗಲ ಹಾಗೂ ೨೯ ಸೆಂ.ಮೀ ಎತ್ತರವನ್ನು ಹೊಂದಿದೆ. ಸ್ಥಳೀಯರಂತೆ ಈ ಶಿಲ್ಪವನ್ನು ಭೊಪ್ಪಸಮುದ್ರದಿಂದ ಕರ್ಣಂ ಲಕ್ಷ್ಮೀಪತಿ ಭಟ್ಟರು ಶಾನುಭೋಗ ಕೆಲಸ ಸಿಕ್ಕಿದ್ದರಿಂದ ಕಂಚಮಲ್ಲನಹಳ್ಳಿಗೆ ತಂದು ಸೇವೆಸಲ್ಲಿಸುತ್ತಿದ್ದಾರೆ ಎಂದು ತಿಳಿಸುವುದು ಕಂಡುಬಂದಿದೆ.

**೩.೩ ರಕ್ಷಣಾ ವಾಸ್ತುಶಿಲ್ಪ**

ಯಾವುದೇ ಸಾಮ್ರಾಜ್ಯಗಳು, ರಾಜ್ಯಗಳು ಉದಯವಾಗುವುದಕ್ಕಿಂತ ಮೊದಲು ಎಲ್ಲ ಜನರು ಚಿಕ್ಕ ಗ್ರಾಮಗಳಲ್ಲಿ ವಾಸಿಸುತ್ತಿದ್ದರು. ತಮ್ಮನ್ನು ತಮ್ಮ ಸಂಪತ್ತನ್ನು ವೈರಿಗಳಿಂದ ಕಳ್ಳರಿಂದ ಕಾಡುಪ್ರಾಣಿಗಳಿಂದ ಸಂರಕ್ಷಿಸಿಕೊಳ್ಳಲು ಅವರು ಗ್ರಾಮಗಳ ಸುತ್ತಲು ಕೋಟೆಯನ್ನು ಕಟ್ಟಲು ಪ್ರಾರಂಭಿಸಿದರು. ಗ್ರಾಮಗಳು ಬೆಳೆದು ಹಲವಾರು ಊರುಗಳು ಒಟ್ಟುಗೂಡಿ ರಾಜ್ಯಗಳು ಸ್ಥಾಪನೆಯಾದ ಮೇಲೆ ಆಳುವ ಅರಸರು ತಮ್ಮ ರಾಜ್ಯಗಳನ್ನು ಸಂರಕ್ಷಿಸಿಕೊಳ್ಳಲು ರಾಜಧಾನಿಯಲ್ಲಿ ಗಡಿಪ್ರದೇಶಗಳಲ್ಲಿ ಬಲವಾದ ಕೋಟೆಗಳನ್ನು ಕಟ್ಟಿಸಿದರು.

ಸಾಮಾನ್ಯವಾಗಿ ಕೋಟೆ ಎಂದರೆ ರಕ್ಷಣೆ ಆವರಣವುಳ್ಳ ಪ್ರದೇಶ ಎಂದರ್ಥ ಅಂದರೆ ರಾಜನು ತನ್ನ ಪರಿವಾರ ಪ್ರಜೆಗಳು ಹಾಗೂ ಸಂಪತ್ತಿನ ರಕ್ಷಣೆಗಾಗಿ ನಿರ್ಮಿಸಿಕೊಂಡ ಭದ್ರವಾದ ಗೋಡೆ ಮತ್ತು ಬಾಗಿಲುಗಳ ವಾಸ್ತುರಚನೆಯ ಕೋಟೆಯಾಗಿದೆ ಎಂದು ರಾಜನೀತಿ ಪ್ರಕಾಶದಲ್ಲಿ ಬೃಹಸ್ಪತಿಯ ವಚನವು ಉಲ್ಲೇಖಿಸಿದೆ.[೩೦] ಕೋಟೆಗಳು ರಾಜಮನೆತನಗಳ ರಕ್ಷಣೆಯಲ್ಲಿ

ಪಾತ್ರವಹಿಸುವುದಲ್ಲದೆ ಪ್ರಮುಖವಾಗಿ ಜೀವಿಸಲಿಕ್ಕೆ ಆಧಾರಗಳಾಗಿದ್ದವು ಆಯಾಕಟ್ಟಿನ ಪ್ರದೇಶಗಳಲ್ಲಿ ವಿಶಾಲವಾಗಿ ಹಾಗೂ ಬಲಿಷ್ಟವಾಗಿ ನಿರ್ಮಾಣಗೊಂಡ ಗೋಡೆಗಳ ಆವರಣಕ್ಕೆ ಕೋಟೆಗಳೆಂದು ಕರೆಯಲಾಗಿದೆ.[೩೧] ಕೋಟೆ ಎಂಬ ಪದಕ್ಕೆ ಪುರ, ಪ್ರಕಾರ, ಕಿಲ್ಲೆ ಎಂಬ ಅರ್ಥಗಳು ಉಂಟು, ಸೈನಿಕರಿಂದ ಆವರಿಸಲ್ಪಟ್ಟ ರಕ್ಷಿತವಾದ ಮತ್ತು ರಕ್ಷಣೆಗೆ ಮುಡುಪಾಗಿರುವ ಗಟ್ಟಿಯಾದ ಸ್ಥಳವೇ ಕೋಟೆ ಎಂದನಿಸಿಕೊಳ್ಳುತ್ತದೆ. ಪ್ರಾಚೀನ ಗ್ರಂಥವಾದ ಋಗ್ವೇದದಲ್ಲಿ ಪುರಗಳ ಉಲ್ಲೇಖವಿದೆ. ಪುರ ಎಂದರೆ ಭದ್ರವಾದಂತಹ ಕೋಟೆಯನ್ನು ಹೊಂದಿರುವ ಪಟ್ಟಣ ಎಂದರ್ಥ.[೩೨]

ರಕ್ಷಣೆ ಎಂದರೆ ಶತ್ರುಗಳ ಧಾಳಿಯಿಂದ ಕಾಪಾಡಿಕೊಳ್ಳುವಿಕೆ ಎಂದಾದರೆ ಒಟ್ಟಾರೆ ಸುಸಂಬದ್ಧವಾಗಿ ಕಟ್ಟಡವನ್ನು ರಚನೆ ಮಾಡಿಕೊಂಡು ಅದರಲ್ಲಿ ರಕ್ಷಣೆ ಪಡೆಯುವುದೇ ರಕ್ಷಣವಾಸ್ತುಶಿಲ್ಪವೆಂದು ಅರ್ಥೈಸಲಾಗಿದೆ. ರಕ್ಷಣಾವಾಸ್ತುಶಿಲ್ಪದಲ್ಲಿ ಕೋಟೆ, ಬುರುಜು, ಬತೇರಿ ಕೋಟೆಯೊಳಗಿನ ಸ್ಮಾರಕ ಶಿಲ್ಪಗಳನ್ನು ಕಾಣಬಹುದು.

**ಕೋಟೆ-ಕೊತ್ತಲುಗಳು**

ಕೊತ್ತಳವೆಂದರೆ ಕೋಟೆಯ ಮೇಲ್ಭಾಗ ಕೋಟೆಯ ಮೇಲೆ ಸೈನಿಕರು ನಿಂತು ಕಾಯುವ ಎತ್ತರ ಪ್ರದೇಶವೆಂದು ಅರ್ಥಕೊಡುತ್ತದೆ. ಕೊತ್ತಳಕ್ಕೆ ಬುರುಜು, ಕೊತ್ತೆಲ, ಕೊತ್ತಲ ಮತ್ತು ಕಾವಲು ಗೋಪುರವೆಂತಲೂ ಕರೆಯುತ್ತಾರೆ. ಕೋಟೆ ಪದದೊಂದಿಗೆ ಕೊತ್ತಳವು ಸೇರಿಕೊಂಡಿದೆ. ದುರ್ಗಹಿನೋ ಪ್ರಜಾಪತಿ ವಾತ್ರಾಭಮ್ರಿವ ದುರ್ಗಗಳಿಲ್ಲದ ರಾಜನು ಬಿರುಗಾಳಿಗೆ ಸಿಲುಕಿದ ಮೊಡವಾಗಿ ಚದುರಿಸಲ್ಪಡುತ್ತಾನೆ. ಎಂದು ಅಭಿಲಾಷಿತಾರ್ಥ ಚಿಂತಾಮಣಿ ಗ್ರಂಥವು ರಾಜನ ವಾಸ್ತವ್ಯಕ್ಕೆ ದುರ್ಗದ ಮಾಹಿತಿಯನ್ನು ಹೇಳುತ್ತದೆ.[೩೩] ರಕ್ಷಣಾ ವ್ಯವಸ್ಥೆಯ ಈ ಪ್ರಾಚೀನ ಸೂತ್ರಕ್ಕೆ ಅನುಗುಣವಾಗಿ ಕರ್ನಾಟಕದ ರಾಜರು ಕೂಡ ಇನ್ನುಳಿದ ಅರಸರಂತೆ ರಾಜ್ಯ ಕಟ್ಟುವ ಹವ್ಯಾಸದಲ್ಲಿ ಘೋರ ಯುದ್ಧಗಳನ್ನೆಸಗಿ ಜಯಿಸಿದ ನಾಡ ನೆಲದ ರಕ್ಷಣೆಗಾಗಿ ಹಾಗೂ ಅಲ್ಲಿಯ ಜನರ ರಕ್ಷಣೆಗಾಗಿ ಮತ್ತು ಸ್ವರಕ್ಷಣೆಗಾಗಿ ಅಲ್ಲಲ್ಲಿ ಕೋಟೆಕೊತ್ತಲುಗಳನ್ನು ಕಟ್ಟಿದರು, ಆ ರಕ್ಷಣಾ ಗೋಡೆಗಳು ನೆಲದ ಹಾಗೂ ಜನರ ರಕ್ಷಣೆ ಮಾಡುತಿದ್ದುದಲ್ಲದೆ, ಮಾನವನ ಜೀವನದ ಗುಣಮೌಲ್ಯಗಳನ್ನು ತನ್ನ ರಕ್ಷಣ ರೆಕ್ಕೆಗಳಲ್ಲಿ ತುಂಬಿಕೊಂಡವು ಹಾಗೂ ಅವುಗಳನ್ನು ಉಳಿಸಿ ಬೆಳೆಸಿಕೊಂಡು ಬಂದವು.

ಕಾಲದಿಂದ ಕಾಲಕ್ಕೆ ಯುದ್ಧ ಅಥವಾ ಅಕ್ರಮಗಳಲ್ಲಿಯ ತಂತ್ರಗಳಿಗೆ ಹೊಸದಾಗಿ ಹಾಗೂ ಅವಿಷ್ಕಾರಗೊಂಡ ಆಯುಧಗಳಿಗೆ ತಕ್ಕಂತೆ ಕೋಟೆಗಳ ರಚನೆಯ ವಿಧಾನದಲ್ಲಿ ಮಾರ್ಪಾಡುಗಳಾದವು.[೩೪] ಭಾರತದಲ್ಲಿ ಪ್ರಾಗೈತಿಹಾಸಿಕ ಕಾಲದಲ್ಲಿ ತಾವು ವಾಸಿಸಿದ

ನೆಲೆಯಸುತ್ತಲೂ ರಕ್ಷಣೆಯ ಬೇಲಿ ಅಥವಾ ಕಿರುಗಾತ್ರದ ಗೋಡೆಯನ್ನು ನಿರ್ಮಿಸಿದ ಉದಾಹರಣೆಗಳಿವೆ. ಹರಪ್ಪಾ ಸಂಸ್ಕೃತಿಯ ಪ್ರಮುಖ ನಗರಗಳು ರಕ್ಷಣಾ ಗೋಡೆಗಳನ್ನು ಹೊಂದಿದ್ದವು. ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ ಹಾಗೂ ಪುರಾಣಗಳಲ್ಲಿ ಕೋಟೆಗಳಿಂದ ಕೂಡಿದ ನಗರಗಳ ಉಲ್ಲೇಖಗಳಿವೆ. ಕೌಟಿಲ್ಯ ನೈಸರ್ಗಿಕ ಸನ್ನಿವೇಷಗಳಿಗನುಗುಣವಾಗಿ ಕೋಟೆಗಳನ್ನು ಜಲದುರ್ಗ, ವನದುರ್ಗ, ಸ್ಥಳದುರ್ಗ, ಗಿರಿದುರ್ಗ ಇತ್ಯಾದಿಯಾಗಿ ವರ್ಗೀಕರಿಸಿ ಅವುಗಳ ರಚನೆಯ ವಿಧಾನವನ್ನು ವಿವರಿಸಿದ್ದಾನೆ.[೩೫]

ರಾಜ್ಯದ ಅತ್ಯಾವಶ್ಯಕವಾದ ಸಪ್ತಾಂಗಗಳಲ್ಲಿ ದುರ್ಗವೂ ಒಂದು ಎಂದು ರಾಜನೀತಿ ಹೇಳುತ್ತದೆ. ಮನುಸ್ಮೃತಿ, ಶುಕ್ರನೀತಿಸಾರ, ಮಾನಸಾರ, ಪಂಚತಂತ್ರ, ಮಾನಸೋಲ್ಲಾಸಗಳಲ್ಲಿ ಕೋಟೆಗಳ ವರ್ಗೀಕರಣ, ಕಟ್ಟಲು ಉಪಯೋಗಿಸಿದ ಸಾಮಾಗ್ರಿ, ಸಂರಕ್ಷಣೆ ವಿಧಾನ ಇವುಗಳ ದೀರ್ಘ ಪರಿಚಯವಿದೆ.[೩೬] ಕ್ರಿ.ಶ. ೧೮೦೦ ರ ಅವಧಿಯಲ್ಲಿ ಕರ್ನಲ್ ಮೆಕೆಂಜೆ ಮೈಸೂರು ಪ್ರಾಂತ್ಯದ ಸಂರಕ್ಷಣೆ ಮಾಡಿ ರಚಿಸಿದ ನಕ್ಷೆಯಲ್ಲಿ ಅಸ್ತಿತ್ವದಲ್ಲಿದ್ದ ಕೋಟೆಗಳನ್ನು ದಾಖಲಿಸಲಾಗಿದೆ. ಆ ನಕ್ಷೆಯ ಪ್ರಕಾರ ಸಾಮಾನ್ಯವಾಗಿ ಪ್ರತಿ ಹೋಬಳಿಯೂ ಕೋಟೆಗಳಿಂದ ಕೂಡಿದ್ದವು, ಆ ಕೋಟೆಗಳು ನಿರ್ದಿಷ್ಟ ಅಂತರದಲ್ಲಿದ್ದು, ಕೇವಲ ಒಂದು ದಿನದ ಅವಧಿಯಲ್ಲಿ ಒಂದು ಕೋಟೆಯಿಂದ ಇನ್ನೊಂದು ಕೋಟೆಗೆ ಎತ್ತಿನ ಗಾಡಿಯ ಮೂಲಕ ಹೋಗಬಹುದಾದ ಸಮಯದ ಅಂತರದಲ್ಲಿರುತ್ತಿದ್ದವು. ಅಲ್ಲದೆ ಈ ಕೋಟೆಗಳನ್ನು ಹೆದ್ದಾರಿ ಅಥವಾ ವಾಣಿಜ್ಯ ಮಾರ್ಗಗಳ ಆಯಾಕಟ್ಟಿನಲ್ಲಿ ನಿರ್ಮಿಸಿರುವುದು ನಕ್ಷೆಗಳಿಂದ ತಿಳಿದುಬರುವುದು.[೩೭]

ಕೋಟೆಗಳು ಕೇವಲ ರಾಜಕೀಯ ಸೈನಿಕ ಕೇಂದ್ರಗಳಾಗಿರದೆ ಸಾಂಸ್ಕೃತಿಕ ಕೇಂದ್ರಗಳಾಗಿದ್ದವು. ಮನರಂಜನೆಗಾಗಿ ಹಬ್ಬ-ಹರಿದಿನಗಳು, ಉತ್ಸವಗಳು, ಕ್ರೀಡಾಕೂಟಗಳು, ಆಗಾಗ್ಗೆ ಕೋಟೆಯೊಳಗೆ ನಡೆಯುತ್ತಿದ್ದವು. ಹಾಗೆಯೆ ಕೋಟೆಯೊಳಗೆ ಅನೇಕ ಕೈಗಾರಿಕಾ ಕೇಂದ್ರಗಳು, ಗುಡಿಕೈಗಾರಿಕೆಗಳು ಅಸ್ತಿತ್ವದಲ್ಲಿರುತ್ತಿದ್ದವು, ಪ್ರಸ್ತುತ ಅಧ್ಯಯನದ ಪ್ರದೇಶವಾದ ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಕೋಟೆ, ಬುರುಜು, ಹುಡೇವುಗಳನ್ನು ಕಾಣಬಹುದು.

**ಪಾಲಯ್ಯನಕೋಟೆ**

ಕಾನಾಹೊಸಹಳ್ಳಿ ಹೋಬಳಿ ವ್ಯಾಪ್ತಿಯಲ್ಲಿಬರುವ ಪಾಲಯ್ಯನ ಕೋಟೆ ಗ್ರಾಮವು ಉತ್ತರಕ್ಕೆ ೧೨ ಕಿ.ಮೀ ದೂರದಲ್ಲಿದ್ದು, ಕೂಡ್ಲಿಗಿ ತಾಲೂಕ ಕೇಂದ್ರದಿಂದ ದಕ್ಷಿಣಕ್ಕೆ ೧೮ ಕಿ.ಮೀ ದೂರದಲ್ಲಿದೆ. ಇದನ್ನು ಅಡವಿ ಪೂಜರಹಳ್ಳಿ ಎಂತಲೂ ಕರೆಯುತ್ತಾರೆ. ಗ್ರಾಮದ ಉತ್ತರಕ್ಕಿರುವ ಬೆಟ್ಟದ ಮೇಲೆ ಕೋಟೆ ಇದೆ. ಕೋಟೆ ಇರುವ ಬೆಟ್ಟವು ತುಂಬಾ ಕಡಿದಾಗಿದೆ. ಪಶ್ಚಿಮಕ್ಕೆ ದೊಡ್ಡ ಹಳ್ಳವಿದೆ. ಬೆಟ್ಟದ ಸುತ್ತಲೂ ದಟ್ಟವಾದ ಕಾಡು ಇದೆ. ಬೆಟ್ಟದ ಮೇಲೆ ನಿಂತು ನೋಡಿದರೆ

ಸುಮಾರು ೨ ಕಿ.ಮೀ ದೂರದ ವರೆಗಿನ ದೃಶ್ಯಗಳು ಕಾಣುತ್ತವೆ. ಈ ಕಾರಣಕ್ಕಾಗಿಯೇ ಬೆಟ್ಟವನ್ನು ಕೋಟೆಕಟ್ಟಲು ಆಯ್ಕೆ ಮಾಡಿಕೊಂಡಿರಬೇಕು ಕೋಟೆಯ ಪೂರ್ವಕ್ಕೆ ಸುಮಾರು ೧೨ ಕಿ.ಮೀ ದೂರದಲ್ಲಿ ಜರಿಮಲೆ ಪಾಳೆಗಾರರ ಸಂಸ್ಥಾನವಿತ್ತು, ಪಶ್ಚಿಮಕ್ಕೆ ಸುಮಾರು ೩೫ ಕಿ.ಮೀ ಅಂತರದಲ್ಲಿ ಹರಪನಹಳ್ಳಿ ಪಾಳೆಯಗಾರರು, ಆಗ್ನೆಯಕ್ಕೆ ಸುಮಾರು ೭೦ ಕಿ.ಮೀ. ದೂರದಲ್ಲಿ ಚಿತ್ರದುರ್ಗದ ಪಾಳೆಯಗಾರರ ರಾಜ್ಯ ಹಾಗೂ ಉತ್ತರಕ್ಕೆ ೩೬ ಕಿ.ಮೀ ದೊರದಲ್ಲಿ ಮರಾಠರ ಘೋರ್ಪಡೆಯ ಸಂಸ್ಥಾನಗಳಿದ್ದವು.[೨೮] ಇವುಗಳ ಕೇಂದ್ರ ಸ್ಥಾನದಲ್ಲಿ ಪಾಲಯ್ಯನಕೋಟೆ ಇದೆ. ಆದರೆ ಈ ಕೋಟೆಯನ್ನು ಯಾರು ಕಟ್ಟಿಸಿದರು ಯಾವಾಗ ಕಟ್ಟಸಿದರು ಏಕೆ ಕಟ್ಟಿಸಿದರೆಂಬ ಮಾಹಿತಿಗಳು ಸಿಕ್ಕಿಲ್ಲ ಕೋಟೆ ಮಾತ್ರ ಸುಸ್ಥಿತಿಯಲ್ಲಿದೆ.

ಗ್ರಾಮದ ಉತ್ತರ ದಿಕ್ಕಿಗೆ ಒಂದು ಕಿ.ಮೀ ದೂರದಲ್ಲಿ ಎರಡು ಬೆಟ್ಟಗಳಿವೆ. ಇವುಗಳಿಗೆ ದುರುಗವ್ವ ಮತ್ತು ಬಸವನ ಬೆಟ್ಟಗಳೆಂದು ಹೆಸರು, ದುರುಗವ್ವನ ಬೆಟ್ಟ ಬಸವನ ಬೆಟ್ಟಕ್ಕಿಂತ ಗಾತ್ರದಲ್ಲಿ ದೊಡ್ಡದು. ಬಸವನ ಬೆಟ್ಟದಲ್ಲಿ ಕುದುರೆ ಹೆಜ್ಜೆಗಳನ್ನು ಕಡೆಯಲಾಗಿದೆ, ಇವು ಆಳ್ವಿಕೆಮಾಡಿದ ಪಾಳೆಯಗಾರರ ಕುದುರೆಯವು ಎಂದು ಸ್ಥಳೀಯರು ಅಭಿಪ್ರಾಯವನ್ನು ತಿಳಿಸಿದರು. ಕೋಟೆ ಇರುವುದು ದುರುಗವ್ವನ ಬೆಟ್ಟದ ಮೇಲೆ ಈ ಕೋಟೆಯು ವಜ್ರಾಕಾರದಲ್ಲಿದೆ. ಕೋಟೆಯನ್ನು ಚಿಕ್ಕಗಾತ್ರದ ಕಲ್ಲುಗಳಿಂದ ಕಟ್ಟಿದೆ. ಕಲ್ಲುಗಳ ಮಧ್ಯದಲ್ಲಿ ಸಂಧಿ ಉಂಟಾಗದಂತೆ ಮಣ್ಣನ್ನು ತುಂಬಲಾಗಿದೆ.

ಸುಮಾರು ೧೫ ರಿಂದ ೬೦ ಅಡಿಗಳಷ್ಟು ಗೋಡೆಗಳು ಎತ್ತರವಾಗಿವೆ. ಕೋಟೆ ಗೋಡೆಯ ಅಗಲ ಸುಮಾರು ೩ ಅಡಿಗಳು ಇದರ ಮೇಲಿದ್ದ ಮಣ್ಣಿನ ಕುಂಬೆಯ ಅವಶೇಷಗಳು ಕಾಣುತ್ತವೆ. ಕೋಟೆ ಗೋಡೆಯು ಸುಸ್ಥಿತಿಯಲ್ಲಿದೆ. ಗೋಡೆಯ ಮಧ್ಯಭಾಗದಲ್ಲಿ ಉದ್ದವಾದ ಬಂದೂಕು ಕಿಂಡಿಗಳಿವೆ. ಕೋಟೆಯ ಆಯಾಕಟ್ಟಿನ ಸ್ಥಳಗಳಲ್ಲಿ ವೃತ್ತಾಕಾರದ ಆರು ಕೊತ್ತಳಗಳಿವೆ, ಇವು ಕೋಟೆ ಗೋಡೆಗಿಂತ ಎತ್ತರವಾಗಿವೆ. ಕೋಟೆಯೊಳಗೆ ಇರುವ ಗೋಡೆಗೆ ಹೊಂದಿಕೊಂಡು ಬೃಹದಾಕಾರದ ಕಾವಲು ಗೋಪುರವಿದೆ. ಕೋಟೆಯ ಪಶ್ಚಿಮದ ಗೋಡೆಯಲ್ಲಿ ಬಾಗಿಲನ್ನು ಜೋಡಿಸಲಾಗಿದೆ, ಕೋಟೆಯೊಳಗೆ ೨ ಭಾಗಗಳಿದ್ದು ಒಂದರಲ್ಲಿ ಮನೆ ಹಾಗೂ ಕಣಜಗಳ ಅವಶೇಷಗಳಿವೆ. ಇನ್ನೊಂದು ಭಾಗ ಖಾಲಿ ಇದೆ, ಕೋಟೆಯ ಪೂರ್ವಕ್ಕೆ ಗೋಡೆಗೆ ಹೊಂದಿಕೊಂಡು ಬಾವಿಯಿದೆ. ಪಶ್ಚಿಮಕ್ಕೆ ಹಳೆಯ ಗ್ರಾಮದ ಕಟ್ಟಡಾವಶೇಷಗಳಿವೆ.

ಊರಿನ ಗ್ರಾಮಸ್ಥರು ಹೇಳುವಾಗೆ ಇಲ್ಲಿಯೇ ಮೊದಲು ಗ್ರಾಮ ಇತ್ತು. ಸುಮಾರು ೯೦ ವರ್ಷಗಳ ಹಿಂದೆ ಪ್ಲೇಗ್ ಹಾವಳಿಗೆ ನೂರಾರು ಜನಬಲಿಯಾದುದರಿಂದ ಗ್ರಾಮವನ್ನು

ಸ್ಥಳಾಂತರಿಸಲಾಗಿದೆ. ಎಂಬ ಮಾಹಿತಿಯನ್ನು ನೀಡಿದ್ದರು, ಇದಕ್ಕೆ ಪೂರಕವಾಗಿ ಪ್ರತಿವರ್ಷವೂ ದುರುಗಮ್ಮ ದೇವಿಗೆ ಜಾತ್ರೆ ಹಾಗೂ ನಿತ್ಯವು ಪೂಜೆ ಪುನಸ್ಕಾರಗಳು ನಡೆಯುತ್ತವೆ.

**ಹೂಡೇಂ**

ಕಾನಾಹೊಸಹಳ್ಳಿ ಪೂರ್ವ ದಿಕ್ಕಿಗೆ ೧೪ ಕಿ.ಮೀ ದೂರದಲ್ಲಿರುವ ಈ ಗ್ರಾಮವೇ ಹೂಡೇಂ ಇದು ಚಿತ್ರದುರ್ಗ ಜಿಲ್ಲೆಯ ಗಡಿ ಭಾಗಕ್ಕೆ ಹೊಂದಿಕೊಂಡಂತಹ ಕೊನೆ ಗ್ರಾಮ ಇದು ಗ್ರಾಮ ಪಂಚಾಯಿತಿ ಕೇಂದ್ರವಾಗಿದೆ.

ಹೂಡೇಂ ಗ್ರಾಮವನ್ನು ಉಡೇವು, ವುಡೆಮ್, ಹೊಡೇಂ ಎಂಬ ಇತ್ಯಾದಿ ಹೆಸರುಗಳಿಂದ ಕರೆಯುವರು, ಊಡೆ ಎಂದರೆ ಆಲದ ಮರದ ಬಿಳಲು ಎಂಬ ಅರ್ಥವಿದೆ, ನಂತರ ಹೊಡೆ ಎಂಬ ಪದಕ್ಕೆ ಕೋಟೆಯ ಬುರುಜು, ಬತೇರಿ, ಮತ್ತು ಕಾವಲು ಸ್ಥಳ ಎಂದು ಅರ್ಥೈಸಲಾಗಿದೆ. ಹುಡೆವು ಬುರುಜಿನ ಒಳಭಾಗ ಶ್ರೀಮಂತರು ವಾಸಿಸುತ್ತಿದ್ದ ಪ್ರದೇಶವೆಂದು ಗುರುತಿಸಬಹುದು, ಕಾಲಾಂತರದಲ್ಲಿ ಜನಸಾಮಾನ್ಯರು ಈ ಪ್ರದೇಶದಲ್ಲಿ ವಾಸಿಸಿರಬೇಕು. ಹೀಗಿದ್ದರೂ ಹೊಡೆಯ ಎಂಬುದು ತೆಲುಗು ಪದವೆನ್ನಲು ಶಕ್ಯವಿದೆ, ಅಂದರೆ ಊಡೇಗಳು, ದೆವಸ, ಧಾನ್ಯ ಸಂಗ್ರಹಿಸುವ ಸ್ಥಳ ಹೊಡೆಯ ಎಂಬ ಹೆಸರು ಕ್ರಮೇಣ ಹೊಡೆವು ಹೊಡೇಂ ಆಗಿರಬೇಕು.[೩೯] ಅಲ್ಲದೆ ಧಾಳಿಕಾರರ ಅನಿರೀಕ್ಷಿತ ಆಕ್ರಮಣದಿಂದ ರಕ್ಷಿಸಲು ಕೋಟೆಯ ಮೇಲ್ಭಾಗದಲ್ಲಿ ಬುರುಜನ್ನು ನಿರ್ಮಿಸುತ್ತಿದ್ದರು.

ಸ್ಥಳೀಯ ಮತ್ತು ಬಾಹ್ಯದಾಳಿಗಳನ್ನು ದೃಷ್ಟಿಕೋನದಲ್ಲಿಟ್ಟುಕೊಂಡು ಸಣ್ಣಪುಟ್ಟ ಕೋಟೆಗಳನ್ನು ಅಥವಾ ಗ್ರಾಮದಲ್ಲಿ ಒಂದು ಅಥವಾ ಎರಡು ಅದಕ್ಕಿಂತಲೂ ಹೆಚ್ಚಿನ ಹುಡೇವುಗಳನ್ನು ನಿರ್ಮಿಸಿಕೊಂಡಿರುವುದನ್ನು ಕಾಣಬಹುದು. ಇದರಿಂದ ಹೊಡೇಂ ಗ್ರಾಮ ನಿರ್ಮಾಣಗೊಂಡಿರಬಹುದು.

**ಬುರುಜುಗಳು**

ಬುರುಜುಗಳಿಗೆ ಕೊತ್ತಲ, ಹುಡೆ, ಕಾವಲುಗೋಪುರ ಎಂದು ಕರೆಯುತ್ತಾರೆ. ಬುರುಜುಗಳಲ್ಲದ ಕೋಟೆಗೋಡೆ ನಮಗೆ ಕಾಣಿಸುವುದಿಲ್ಲ. ಎರಡು ಕೋಟೆಯ ಗೋಡೆಗಳು ಸಂಧಿಸುವ ಸ್ಥಳವನ್ನು ಗೊಂಟು ಎಂದು ಕರೆಯುತ್ತಾರೆ. ಅಂತಹ ಸಂದಿಸ್ಥಾನಗಳಲ್ಲಿ ಅಟ್ಟಾಲಕಗಳಿಗಿಂತ ಎತ್ತರವಾಗಿ ಕಟ್ಟಿದ ವೀಕ್ಷಣಾ ಕೇಂದ್ರಗಳೇ ಬುರುಜುಗಳು.

ಹೂಡೇಂ ಗ್ರಾಮದ ಪ್ರವೇಶದ್ವಾರದ ರಸ್ತೆಯ ಮಾರ್ಗವಾಗಿ ಈಶ್ವರ ದೇವಾಲಯದ ಪಕ್ಕದಲ್ಲಿ ಒಂದು ಬುರುಜು, ಮತ್ತೊಂದು ದೇವಾಲಯದ ಹಿಂಬಾಗದಲ್ಲಿದೆ. ಇನ್ನೊಂದು ಸಂಪೂರ್ಣವಾಗಿ ಹಾಳಾಗಿದೆ. ಈ ಗ್ರಾಮದಲ್ಲಿ ವೃತ್ತಾಕಾರದ ಮೂರು ಬುರುಜುಗಳನ್ನು

ಹೊಂದಿದ್ದು ಅವುಗಳು ಕಪ್ಪುಕಲ್ಲು ಮತ್ತು ಬಿಳಿಕಲ್ಲಿನಿಂದ ನಿರ್ಮಿಸಿದ್ದಾರೆ. ಸುಮಾರು ೧೨ ಅಡಿ ಎತ್ತರವಾಗಿವೆ. ಸ್ಥಳೀಯರು ಹೇಳುವಾಗೆ ಊರನ್ನು ರಕ್ಷಿಸಲು ನಿರ್ಮಿಸಿದ ಗೋಪುರಗಳೆಂದು ಮಾಹಿತಿ ನೀಡಿದ್ದಾರೆ.

**ಕಾನಾಮಡುಗು**

ಕಾನಾಹೊಸಹಳ್ಳಿಯಿಂದ ದಕ್ಷಿಣಕ್ಕೆ ೮ ಕಿ.ಮೀ ದೂರದಲ್ಲಿರುವ ಗ್ರಾಮವೇ ಕಾನಾಮಡುಗು. ಕೋಟೆ ರಕ್ಷಣೆಗೆ ಕಾವಲುಗೋಪುರ, ಸೈನಿಕರು ಹಾಗೂ ಯುದ್ಧ ನೀತಿ ತಂತ್ರ ಎಷ್ಟು ಮುಖ್ಯವಾಗಿದ್ದವೋ ಅದೇ ರೀತಿ ಕೋಟೆಯ ಒಳಗೆ ಮೂಲಭೂತ ಅವಶ್ಯಕತೆಗಳಾದ ಆಹಾರ ಮತ್ತು ನೀರನ್ನು ಸಂಗ್ರಹಿಸುವುದು ಅಷ್ಟೇ ಅವಶ್ಯಕವಾಗಿತ್ತು. ಹೀಗೆ ಸಂಗ್ರಹಿಸಿದ ಆಹಾರ ಧಾನ್ಯಗಳು ಕೆಡದಂತೆ ಅಥವಾ ಸುಲಭವಾಗಿ ಶತ್ರುಗಳ ವಶವಾಗದಂತೆ ತಡೆಯಲು ಕಣಜಗಳನ್ನು, ಹಗೇವುಗಳನ್ನು ನಿರ್ಮಿಸಿಕೊಂಡಿರುವುದನ್ನು ಕಾಣುತ್ತೇವೆ. ಈ ರೀತಿಯಾಗಿ ಆಹಾರಧಾನ್ಯಗಳನ್ನು ಸಂಗ್ರಹಿಸಿಕೊಂಡಿರುವ ಕಾನಾಮಡುಗು ಮಠದ ದೇವಾಲಯದ ಹಿಂಭಾಗದಲ್ಲಿ ಕಾಣುತ್ತೇವೆ. ಈ ಹಗೇವುಗಳಲ್ಲಿ ಹಿಂದೆ ಮಠಕ್ಕೆ ಬರುವ ಭಕ್ತಾದಿಗಳಿಗೆ ಪ್ರಸಾದ ನೀಡಲು ಬೇಕಾಗುವ ಆಹಾರ ಧಾನ್ಯಗಳನ್ನು ಶೇಖರಿಸಿಡುತ್ತಿದ್ದರು.

**ಕುಮತಿ ಕೋಟೆ**

ಕಾನಾಹೊಸಹಳ್ಳಿ ಹೋಬಳಿಯಿಂದ ೨೨ ಕಿ.ಮೀ ದೂರದಲ್ಲಿರುವ ಈ ಪ್ರದೇಶವು ಬಯಲು ಪ್ರದೇಶವಾಗಿದ್ದು ಸಣ್ಣ ಪುಟ್ಟ ಗುಡ್ಡಗಳನ್ನು ಗ್ರಾಮದ ಸುತ್ತ ಕಾಣಬಹುದಾಗಿದೆ. ಪ್ರಸ್ತುತ ಹಳೇಗ್ರಾಮದ ನೈರುತ್ಯ ಭಾಗದಲ್ಲಿ ಸಿದ್ಧಲಿಂಗೇಶ್ವರ ದೇವಾಸ್ಥಾನದ ಮುಂಭಾಗದಲ್ಲಿ ಎತ್ತರವಾದ ಪ್ರದೇಶದಲ್ಲಿ ಕೋಟೆಯ ಅವಶೇಷಗಳಿವೆ. ಕೋಟೆಗೆ ಉತ್ತರ ದಿಕ್ಕಿನಲ್ಲಿ ಪ್ರವೇಶದ್ವಾರವಿದ್ದು ಅದರ ಮೇಲೆ ಕೈಪಿಡಿಗೋಡೆ ಕಟ್ಟಿರುತ್ತಾರೆ. ಕೋಟೆ ಗೋಡೆಯಲ್ಲಿ ವೃತ್ತಾಕಾರದ ಕೊತ್ತಳಗಳಿರುವಂತೆ ಗೋಚರಿಸಿತ್ತದೆ. ಕೋಟೆ ಗೋಡೆಯನ್ನು ಚಿಕ್ಕ ಚಿಕ್ಕ ಕಲ್ಲುಗಳು, ಇಟ್ಟಿಗೆ ಇವುಗಳ ಮಧ್ಯ ಮಣ್ಣನ್ನು ತುಂಬಿ ಕಟ್ಟಲಾಗಿದೆ. ನೆಲಮಟ್ಟದಿಂದ ಗೋಡೆ ಎಷ್ಟು ಎತ್ತರ ಇತ್ತು ಎಂಬುದಕ್ಕೆ ಪೂರ್ಣ ಪ್ರಮಾಣದ ಗೋಡೆ ಎಲ್ಲೂ ಕಂಡುಬಂದಿಲ್ಲ, ಶಿಥಿಲಾವಸ್ಥೆಯಲ್ಲಿರುವ ಕೋಟೆಯ ಪೂರ್ವ ಹಾಗೂ ಪಶ್ಚಿಮ ದಿಕ್ಕುಗಳಲ್ಲಿ ಗೋಡೆಯ ಅಲ್ಪ-ಸ್ವಲ್ಪ ಭಾಗಗಳು ಕಂಡುಬರುತ್ತವೆ.

ಈ ಕೋಟೆಯನ್ನು ಯಾರು ಕಟ್ಟಿಸಿದರು ಎಂಬುದರ ಉಲ್ಲೇಖಗಳು ನಮಗೆ ಸಿಗುವುದಿಲ್ಲ. ಆದರೆ ಕುಮತಿಯು ಗುಡೇಕೋಟೆಯ ಸಮೀಪದಲ್ಲಿರುವುದರಿಂದ ಬಹುಶಃ ಗುಡೇಕೋಟೆ ಪಾಳೆಯಗಾರರ ಕಾಲದಲ್ಲಿ ಸಣ್ಣ ಪ್ರಮಾಣದ ಕೋಟೆಯನ್ನು ನಿರ್ಮಿಸಿಕೊಂಡಿರಬಹುದು ಎಂದು ಊಹಿಸಲಾಗಿದೆ. ಅದರಂತೆಯೇ ಅಲ್ಲಿನ ಗ್ರಾಮದ ಸ್ಥಳೀಯರನ್ನು ವಿಚಾರಿಸಿದಾಗ ಅವರು ಸಹ

ಇದೇ ರೀತಿಯಾ ಮಾಹಿತಿಯನ್ನು ನೀಡುವುದರಿಂದ ಇದು ಗುಡೇಕೋಟೆ ಪಾಳೆಗಾರರ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಹೇಳಬಹುದು ಸಿದ್ಧಲಿಂಗೇಶ್ವರ ದೇವಾಲಯದ ಹಿಂಭಾಗದಲ್ಲಿ ಒಂದು ಬುರುಜು ಇದ್ದು ಹಾಳಾಗಿ ಅಲ್ಪ ಸ್ವಲ್ಪ ಉಳಿದು ಕೊಂಡಿದೆ. ಇದನ್ನು ಎತ್ತರವಾದ ಪ್ರದೇಶದಲ್ಲಿ ನಿರ್ಮಿಸಿದ್ದಾರೆ. ಇದರ ಮೇಲೆ ನಿಂತರೆ ಇದೇ ಕುಮತಿ ಗ್ರಾಮವು ಸಂಪೂರ್ಣವಾಗಿ ಕಾಣಿಸುತ್ತದೆ.

**ಕರೆಪೂಜಾರಹಳ್ಳಿ**

ಕಾನಾಹೊಸಹಳ್ಳಿ ಹೋಬಳಿಯಿಂದ ಪೂಜಾರಹಳ್ಳಿ ಗ್ರಾಮದ ಉತ್ತರಕ್ಕೆ ಇರುವ ಕರೆಪೂಜಾರಹಳ್ಳಿಯು ಇಂದು ಹಾಳೂರು ಆಗಿದೆ. ಈ ನಿವೇಶನವು ತೋಟದ ಪೆದ್ದ ಓಬಯ್ಯ ಮತ್ತು ತೋಟದ ಬೋರಯ್ಯನ ಅಣ್ಣ–ತಮ್ಮಂದಿರ ಹೊಲದಲ್ಲಿದೆ. ಈ ಹಾಳೂರಿನಲ್ಲಿ ಕೋಟೆ.ಕಂದಕ, ಬುರುಜು, ಇತರೆ ಭಗ್ನಾವಶೇಷಗಳು ಪ್ರಾಚೀನತೆಯನ್ನು ಸಾಕ್ಷೀಕರಿಸುತ್ತವೆ. ಮನೆ, ಬಾವಿ, ಬೀದಿ ಇತರ ಲಕ್ಷಣಗಳಿವೆ. ಇಲ್ಲರುವ ಕೋಟೆ–ಬುರುಜು ಕಲ್ಲು ಮಣ್ಣಿನಿಂದ ನಿರ್ಮಾಣ ಗೊಂಡಿದೆ. ಸುಮಾರು ೮ ಅಡಿ ಆಳಕ್ಕೂ ಹೆಚ್ಚು ಕಂದಕವಿದ್ದು ನಡುವೆ ಎತ್ತರವಾದ ಬುರುಜು ಇದೆ. ಇದನ್ನು ಸ್ಥಳೀಯರು ಕೋಟೆ ಎಂದು ಕರೆಯುತ್ತಾರೆ. ಇಲ್ಲಿರುವ ಅವಶೇಷಗಳ ಪೈಕಿ ಮನೆಗಳ ವಿಸ್ತೀರ್ಣ ೯ ಅಡಿ ಅಗಲ ೧೧ ಅಡಿ ಉದ್ದ ೭ ಅಡಿ ಎತ್ತರವನ್ನು ಇಟ್ಟುಕೊಳ್ಳಲಾಗಿದೆ. ಎರಡು ಬೀದಿಗಳಿದ್ದು ಪ್ರತ್ಯೇಕ ಎರಡು ರಸ್ತೆಗಳಿವೆ. ವೃತ್ತಾಕಾರದ ನೀರಿನ ಬಾವಿಯನ್ನು ಸಹ ಕಾಣಬಹುದು.

**ಕಟ್ಟಿಂಗನ ಹಳ್ಳಿ**

ಪೂಜಾರಹಳ್ಳಿ ಗ್ರಾಮದ ವ್ಯಾಪ್ತಿಯಲ್ಲಿ ಬರುವ ಈ ನಿವೇಶನವು ಇಂದು ಹಾಳಾಗಿರುವುದು ಕಂಡುಬರುತ್ತದೆ. ಈ ನಿವೇಶನದ ಸುತ್ತಲೂ ಮಣ್ಣಿನಿಂದ ಮಾಡಿದ ಏರಿ, ದಿಬ್ಬ ಅಥವಾ ರಕ್ಷಣಾ ಕೋಟೆ, ಬತೇರಿಗಳಿವೆ. ಇವುಗಳ ನಡುವೆ ಬೃಹದಾಕಾರದ ಮನೆ ನಿವೇಶನಗಳು, ಬೀದಿ, ಬಾವಿಗಳು ಕಂಡು ಬಂದಿವೆ. ಈ ನಿವೇಶನವು ದಕ್ಷಿಣಾಭಿಮುಖವಾಗಿ ದ್ವಾರಗಳಿದ್ದು ಪೂರ್ವಾಭಿಮುಖವಾಗಿ ಮನೆ ಬಾಗಿಲುಗಳಿವೆ. ಈ ಕಟ್ಟಿಂಗನಹಳ್ಳಿಯು ಎತ್ತರವಾದ ಪ್ರದೇಶದಲ್ಲಿದೆ.

**ಕೆರೆಗಳು**

ನೀರು ಮಾನವನ ಸಂಸ್ಕೃತಿಯ ವಿಕಸನದಲ್ಲಿ ಅಮೋಘವಾದ ಪ್ರಭಾವವನ್ನು ಬೀರಿದೆ. ಪ್ರಾಗೈತಿಹಾಸಿಕ ಕಾಲದ ಮಾನವನು ನೀರು ಸಿಗುವಂತಹ ನೈಸರ್ಗಿಕ ತಾಣಗಳಲ್ಲಿ ವಾಸಿಸುತ್ತಿದ್ದನು. ನದಿಯ ಸರೋವರ, ದಡ, ಕುಂಟೆಗಳು ಇತ್ಯಾದಿಗಳಾಗಿವೆ. ಕಾಲ ನಂತರ

ಪಶುಪಾಲನಾ ಹಂತಗಳನ್ನು ದಾಟಿ ಕೃಷಿಯನ್ನು ತನ್ನ ಜೀವನಾಧಾರ ಕಸುಬೆಂದು ತಿಳಿದು ಮಳೆಯ ಅಥವಾ ಹೊಳೆಯ ನೀರನ್ನು ಸಾಕಷ್ಟು ಕಾಲ ಹಿಡಿದಿಟ್ಟುಕೊಳ್ಳುವ ಅವಶ್ಯಕತೆ ಕಂಡುಬಂದಿತು. ಮಾನವ ಈ ಹಿನ್ನೆಲೆಯಲ್ಲಿ ಮುನ್ನಡೆದು ಕೃತಕವಾಗಿ ನೀರನ್ನು ಸಂಗ್ರಹಿಸಿಕೊಂಡು ತನ್ನ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳಲು ನಡೆಸಿದ ಪ್ರಯತ್ನಗಳ ಫಲವೇ ಕೆರೆ-ಕಟ್ಟೆ-ಬಾವಿಗಳಾಗಿ ರೂಪತಾಳಿದವು. ನಾಡಿನ ಸಂಸ್ಕೃತಿ ನಿರ್ಮಾಣದಲ್ಲಿ ಕೆರೆಯ ಪಾತ್ರ ಪ್ರಮುಖವಾಗಿದೆ.[೪೦]

ಕೆರೆಯ ನಿರ್ಮಾಣ ಊರ ನಿರ್ಮಾಣಕ್ಕೆ ಹಾಕುವ ಭದ್ರವಾದ ತಳಹದಿಯನ್ನಬಹುದು. ಕೆರೆಯ ಸುತ್ತಮುತ್ತ ಗ್ರಾಮಗಳು ರೂಪುಗೊಂಡಿವೆ. ಜಲವಾಚಕದ ಬಗ್ಗೆ ಶಾಸನಗಳಲ್ಲಿ ಏರಿ, ಕಟ್ಟೆ, ಕಾಲುವೆ, ಕುಂಟೆ, ಕೆರೆ, ಕೊಳ, ಕುಳಿ, ಕೋಡಿ, ಗುಂಡಿ, ತಟಾಕ, ತೀರ್ಥ, ನೀರು ಬೆಳ್ಳಿ ಮಡವು ಸರೋವರ, ಹಳ್ಳ, ಹೊಂಡ ಮುಂತಾದ ಜಲವಾಚಕ ಪ್ರತ್ಯಯಗಳು ಬಳಕೆಯಲ್ಲಿವೆ. ಕೆರೆ ಎಂಬ ಪದ ಉತ್ತರ ಕರ್ನಾಟಕದಲ್ಲಿ ಅಧಿಕವಾಗಿ ಪ್ರಯೋಗ ಗೊಂಡ ಪದ, ಕೆರೆ, ಕೇರಿ, ಗೇರೆ, ಗೇರಿ. ಎಂಬ ವಿವಿಧ ರೂಪಗಳಲ್ಲಿ ಕಾಣಬಹುದು. ಉದಾ: ಲೋಕಿಗೆರೆ>ಲೋಕಿಕೆರೆ>ಲೋಕಿಕೆರೆ. ಇತ್ಯಾದಿ ಸ್ಥಳನಾಮಗಳನ್ನು ಅಧ್ಯಯನ ಪ್ರದೇಶದಲ್ಲಿ ಗಮನಿಸಬಹುದಾಗಿದೆ. ಕೆರೆಯ ನಿರ್ಮಾಣದ ಪ್ರಯುಕ್ತ ಗ್ರಾಮಕ್ಕೆ ಈ ಹೆಸರು ಬಂದಂತೆ ಕಾಣಬಹುದು.

ಪ್ರಸ್ತುತ ನನ್ನ ಅಧ್ಯಯನದ ಪ್ರದೇಶವಾದ ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಐದು ಕೆರೆಗಳನ್ನು ಗುರುತಿಸಿಕೊಂಡು ಅವುಗಳ ಹುಟ್ಟು, ಬೆಳವಣಿಗೆ ಹಾಗೂ ಅಲ್ಲಿನ ಸಂಸ್ಕೃತಿಯನ್ನು ವಿವರಿಸಲಾಗಿದೆ.

**ತೋಬು**

ಕೆರೆಯ ಒಂದು ಅವಿಭಾಜ್ಯ ಅಂಗ ತೋಬುಗಳೇ ತೋಬುಗಳಿಲ್ಲದ ಕೆರೆ ಕಾರ್ಯ ಅಸಾಧ್ಯ. ಕೆರೆಯ ನೀರನ್ನು ಹೋರಗೆ ಹೋಗದಂತೆ ತಡೆ ಹಿಡಿದಿಡುವ ಸಾಧನವಾಗಿದೆ. ತೋಬುಗಳನ್ನು ಸಾಮಾನ್ಯವಾಗಿ ಕಲ್ಲಿನಿಂದ ರಚಿಸಿದ್ದು, ಎರಡು ಅಥವಾ ನಾಲ್ಕು ಕಂಬಗಳಿಂದ ಕೂಡಿರುತ್ತವೆ. ನನ್ನ ಅಧ್ಯಯನದ ಪ್ರದೇಶದಲ್ಲಿರುವಂತಹ ಎಲ್ಲಾ ಕೆರೆಗಳು ಎರಡು ಕಂಬಗಳಿಂದ ಕೂಡಿದ ತೂಬುಗಳಿವೆ. ಈ ತೂಬು ಎರಡು ಕಂಬಗಳ ನಡುವಿನಲ್ಲಿ ಒಂದು ಅಡ್ಡಗಲ್ಲನ್ನು ಹಾಸಲಾಗುತ್ತದೆ. ಇದರ ಮೂಲಕವಾಗಿ ರಂಧ್ರದ ಅಳತೆಗೆ ತಕ್ಕ ವ್ಯಾಸವುಳ್ಳ ಮರದ ತುಂಡನ್ನು ಅಥವಾ ಆಧುನಿಕ ಲೋಹ ಬಳಸಿ ರಂಧ್ರವನ್ನು ಮುಚ್ಚಲಾಗುತ್ತದೆ. ಬೇಕಾದಾಗ ನೀರನ್ನು ಬಳಕೆ ಮಾಡಿಕೊಳ್ಳಬಹುದು. ಈ ರೀತಿಯಾದಂತಹ ಕೆರೆಗಳೆಂದರೆ ಕಾನಾಹೊಸಹಳ್ಳಿ ಕೆರೆ, ಹುಲಿಕೆರೆ, ಲೋಕಿಕೆರೆ, ಇಮ್ಮಡಾಪುರಕೆರೆ, ಚೌಡಾಪುರಕೆರೆ, ಜುಮ್ಮೋಬನಹಳ್ಳಿ ಕೆರೆಗಳನ್ನು ಕಾಣಬಹುದು.

**ಕೋಡಿ**

ಕೋಡಿಯು ಬಹಳ ಮುಖ್ಯವಾದ ಕೆರೆಯ ಭಾಗವಾಗಿದೆ. ಅತಿ ಹೆಚ್ಚು ನೀರು ಬಂದಾಗ ಕೆರೆ ಏರಿಗೆ ಒತ್ತಡ ಬೀಳುತ್ತದೆ ಆ ಒತ್ತಡವನ್ನು ತಡೆಯಲು ಕೋಡಿಗಳನ್ನು ಅಳವಡಿಸಲಾಗುತ್ತದೆ. ಒಂದು ಕೆರೆಯ ಕೋಡಿ ಬಿತ್ತೆಂದರೆ ಆ ಕೆರೆಗೆ ಗರಿಷ್ಟ ಮಟ್ಟದ ನೀರು ಬಂದಿದೆ ಎಂದರ್ಥ.[೪೧] ಈ ತರಹದ ಕೋಡಿಗಳು ಅಧ್ಯಯನ ಪ್ರದೇಶದಲ್ಲಿನ ಗ್ರಾಮಗಳ ಕೆರೆಗಳಲ್ಲಿವೆ.

**ಏರಿ**

ಏರಿಯು ಕೆರೆಯ ಒಂದು ಪ್ರಮುಖ ಭಾಗ. ಇದು ಕೆರೆಯಲ್ಲಿ ಸಂಗ್ರಹವಾಗುವ ನೀರನ್ನು ತಡೆಯುತ್ತದೆ. ಆದುದರಿಂದ ಈ ಭಾಗವು ಅತ್ಯಂತ ಗಟ್ಟಿಯಾಗಿರಬೇಕಾಗುತ್ತದೆ. ಈ ಭಾಗವು ಮಣ್ಣಿನಿಂದ ಕಟ್ಟಲ್ಪಡುತ್ತದೆ. ಮಣ್ಣನ್ನು ಹಾಕಿ ನೀರಿನಿಂದ ನೆನೆಸಿ ಗಟ್ಟಿ ಮಾಡಿ ಅದರ ಮೇಲೆ ಮತ್ತಷ್ಟು ಮಣ್ಣನ್ನು ಹಾಕುತ್ತಾ ಈ ರೀತಿ ಪದೇ ಪದೇ ಮಾಡುವುದರಿಂದ ಮಣ್ಣು ಚೆನ್ನಾಗಿ ಕೂಡಿಕೊಂಡು ಗಟ್ಟಿಯಾಗುತ್ತದೆ. ಬಹುತೇಕವಾಗಿ ಕೆರೆಯ ತಳಭಾಗದ ಮಣ್ಣನ್ನು ಅಗೆದು ಏರಿಕಟ್ಟಲು ಉಪಯೋಗಿಸುತ್ತಾರೆ.

ಇದರಿಂದ ಕೆರೆಯ ತಳಭಾಗದಲ್ಲಿ ಹೆಚ್ಚು ನೀರು ಸಂಗ್ರಹಗೊಳ್ಳುತ್ತದೆ. ಸಾಮಾನ್ಯವಾಗಿ ಕೆರೆ ಏರಿಯ ತಳ ಭಾಗವು ವಿಶಾಲವಾಗಿದ್ದು ಅದು ಮೇಲಕ್ಕೆ ಹೋದಂತೆ ಕಿರಿದಾಗುತ್ತಾ ಹೋಗುತ್ತದೆ. ಕೆರೆಯ ಏರಿಯ ನೀರಿರುವ ಭಾಗಕ್ಕೆ ಸಾಮಾನ್ಯವಾಗಿ ಕಲ್ಲಿನ ಜೋಡಣೆಯನ್ನು ಹೊದಿಸಿರುತ್ತಾರೆ. ಕಲ್ಲಿನ ಜೋಡಣೆಯು ಇದ್ದ ಪಕ್ಕದಲ್ಲಿ ಏರಿಗೆ ಆಗುವ ದಕ್ಕೆಯನ್ನು ಮತ್ತು ಮಣ್ಣು ಕೊರತೆಯನ್ನು ಸಹ ಸಾಕಷ್ಟು ಮಟ್ಟಿಗೆ ತಡೆಯುತ್ತದೆ.

**ಕಟ್ಟೆ**

ನೀರನ್ನು ಶೇಖರಿಸುವ ಕಿರು ಜಲಾಶಯವೇ ಕಟ್ಟೆ ಕೆರೆಕಟ್ಟೆ ಎಂದು ಜೋಡಿ ಪದವಾಗಿಯು ಬಳಕೆಯಲ್ಲಿದೆ. ಕಟ್ಟೆ ಎಂದರೆ ಕೆರೆ ಎಂಬ ಅರ್ಥವನ್ನು ಸ್ಪಷ್ಟಪಡಿಸುತ್ತದೆ. ದನಕರುಗಳಿಗೆ ಕುಡಿಯುವ ನೀರನ್ನು ಒದಗಿಸುವ ಜಲಾಶಯವೇ ಕಟ್ಟೆ ಎಂದು ಕರೆಯಲಾಗಿದೆ. ಹಳ್ಳಿಗಳಲ್ಲಿ ಗೋಕಟ್ಟೆಗಳನ್ನು ಕಾಣಬಹುದು. ನನ್ನ ಅಧ್ಯಯನದ ಪ್ರದೇಶದಲ್ಲಿ ಅನೇಕ ಕೆರೆಕಟ್ಟೆಗಳು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿವೆ.

**ಕಾನಾಹೊಸಹಳ್ಳಿ ಕೆರೆ**

ಕಾನಾಹೊಸಹಳ್ಳಿ ಕೆರೆಯ ನಿರ್ಮಾಣದ ಬಗ್ಗೆ ಸ್ಥಳೀಯರ ಅಭಿಪ್ರಾಯದಂತೆ ಈ ಪ್ರದೇಶದಲ್ಲಿ ಮಳೆಯ ನೀರು ಪೋಲಾಗುತ್ತಿರುವದನ್ನು ಕಂಡು ಬ್ರಿಟೀಷರು ಈ ಕೆರೆಯನ್ನು ನಿರ್ಮಿಸಿದ್ದಾರೆಂದು ಹೇಳುತ್ತಾರೆ. ಕೆರೆಯ ಏರಿಯು ಸ್ಥಳೀಯವಾಗಿ ಸಿಗುವ ಕಲ್ಲುಗಳು

ಮಣ್ಣಿನಿಂದ ಎತ್ತರವಾಗಿ ನಿರ್ಮಿಸಲಾಗಿದೆ. ಕೆರೆಯ ತುಬೂ ೫ ಅಡಿ ಎತ್ತರವಾಗಿದ್ದು ಎರಡು ಕಂಬಗಳ ನಡುವಿನಲ್ಲಿ ಒಂದು ಅಡ್ಡಗಲ್ಲನ್ನು ಹಾಕಲಾಗುತ್ತದೆ. ಇದರ ಮೂಲಕ ರಂಧ್ರದ ಅಳತೆಗೆ ತಕ್ಕದಾದ ಕಬ್ಬಿಣದ ಲೋಹ ಬಳಸಿ ರಂಧ್ರವನ್ನು ಮುಚ್ಚಲಾಗುತ್ತದೆ. ಇದರಿಂದ ಅವಶ್ಯಕತೆಯಿದ್ದಾಗ ನೀರನ್ನು ಬಳಕೆ ಮಾಡಿಕೊಳ್ಳಲು ಸಹಾಯಕವಾಗುತ್ತದೆ. ಈ ಕೆರೆಯ ಉದ್ದ ೫೪೦ ಮೀಟರ್ ಹೊಂದಿದೆ. ಈ ಕೆರೆಯು ನೀರಿನ ಸಾಮರ್ಥ್ಯ ೨೦.೭೦ ಎಂ.ಸಿ.ಎಫ್.ಟಿ ಹೊಂದಿದ್ದು ನೀರನ್ನು ಕೃಷಿಗೆ ಬಳಸುತಿರುವುದನ್ನು ಕಂಡುಬರುತ್ತದೆ.

ಪ್ರಸ್ತುತ ದಿನಗಳಲ್ಲಿ ಕೆರೆಯಲ್ಲಿ ನೀರಿನ ಸುಳಿವು ಇಲ್ಲ ಇದಕ್ಕೆ ಕಾರಣ ಉತ್ತಮವಾದ ಮಳೆಯಿಲ್ಲದಿರುವುದು. ಅಲ್ಲದೆ ಕೆರೆಗೆ ನೀರು ಸರಬಾರಾಜು ಆಗುವ ಹಳ್ಳಿಗಳಿಗೆ ಅಲ್ಲಲ್ಲಿ ತಡೆಗೋಡೆಗಳನ್ನು ಚೆಕ್‌ಡ್ಯಾಮ್‌ಗಳನ್ನು ನಿರ್ಮಿಸಿರುವುದರಿಂದ ನೀರು ಕೆರೆಗೆ ಬರಲು ಸಾಧ್ಯವಾಗುತ್ತಿಲ್ಲ. ಈ ಕೆರೆಯ ಅಂಗಳದಲ್ಲಿ ಇಟ್ಟಿಗೆ ಬಟ್ಟಿಗಳು ಕಂಡುಬರುತ್ತವೆ. ಅಲ್ಲದೆ ಹೊಳನ್ನು ತೆಗೆದಿರುವ ಗುಂಡಿಗಳಲ್ಲಿ ದಟ್ಟವಾದ ಕುರುಚಲು ಗಿಡಗಳು ಕಂಡುಬರುತ್ತವೆ. ಕೆರೆಯ ಹಿಂಭಾಗದಲ್ಲಿ ಮಾಗಣಿ ಮಾಡಿದ ಕುರುಹುಗಳಾಗಿ ನೀರಿನ ಕಾಲುವೆಗಳು ಕಂಡುಬರುತ್ತವೆ. ಈ ಕೆರೆಯ ಕೋಡಿಯ ಹೊರಹರಿವು ೧೫೬೧,೦೦ ಕ್ಯೂಸೆಕ್ಸ್ ನೀರು ಹೋಗುತ್ತದೆ. ಇತ್ತೀಚೆಗೆ ನೀರಿನ ಮಟ್ಟ ಖಾಲಿಯಾಗಿದೆ. ಈ ಕೆರೆಯ ನೀರನ್ನು ಕಾಲುವೆಗಳ ಮೂಲಕ ಬಳಸಿಕೊಂಡು ರಾಗಿ, ಜೋಳ, ಭತ್ತ, ತರಕಾರಿ, ಶೇಂಗ, ವಿವಿಧ ರೀತಿಯಾದ ದವಸ ಧಾನ್ಯಗಳನ್ನು ಬೆಳೆಯುತ್ತದ್ದರು.

**ಹುಲಿಕೆರೆ**

ಕಾನಾಹೊಸಹಳ್ಳಿ ಹೋಬಳಿ ಕೇಂದ್ರದಿಂದ ದಕ್ಷಿಣಕ್ಕೆ ೪ ಕಿ.ಮೀ ದೂರದ ಹುಲಿಕೆರೆ ಗ್ರಾಮಕ್ಕೆ ಹೋಗುವ ರಸ್ತೆಯ ಪಕ್ಕದಲ್ಲಿ ಈ ಕೆರೆಯನ್ನು ಕಾಣಬಹುದು. ಈ ಕೆರೆ ಏರಿಯ ಉದ್ದ ೮೪೬ ಮೀಟರ್ ಹೊಂದಿದ್ದು ಸ್ಥಳೀಯವಾಗಿ ದೊರೆಯುವ ಕಲ್ಲು ಮಣ್ಣಿನಿಂದ ಈ ಕೆರೆಯನ್ನು ನಿರ್ಮಿಸಲಾಗಿದೆ. ಎತ್ತರವಾದ ಎರಡು ಕಂಬಗಳ ಮಧ್ಯ ಅಡ್ಡಗೋಲನ್ನು ರಂಧ್ರದ ಮೂಲಕ ಮುಚ್ಚಲಾಗಿದೆ. ಇಲ್ಲಿ ಸಹ ಕಬ್ಬಿಣದ ತೂಬನ್ನು ಬಳಕೆ ಮಾಡಿದ್ದಾರೆ. ಹುಲಿಕೆರೆಯು ೩೨.೧೩ ಎಂ.ಸಿ.ಎಫ್.ಟಿ ಗಳಲ್ಲಿ ನೀರುಹೊಂದಿದ್ದು ೮೪.೦೦ ಹೆಕ್ಟರ್‌ಗಳಿಗೆ ಕೃಷಿ ಮಾಡಲು ನೀರು ಒದಗಿಸುತ್ತದೆ. ೧೬,೭೭,೦೦ ರಷ್ಟು ಹೊರಹರಿವು ಇದ್ದು ಹುಲಿಕೆರೆ ಗ್ರಾಮದ ನಿವಾಸಿಗಳು ಕಾಲುವೆಯ ಮೂಲಕ ನೀರಾವರಿ ಪದ್ಧತಿ ಕಾಣಬಹುದು ಆದರೆ ಇತ್ತೀಚೆಗೆ ಮಳೆ ಪ್ರಮಾಣ ಕಡಿಮೆಯಾಗಿ ನೀರು ಇಲ್ಲದೆ ಈ ಕೆರೆಯು ಭತ್ತಿ ಹೋಗಿದೆ. ಜಾಲಿ ಗಿಡಗಳು ಮಾತ್ರ ಸಾಕಷ್ಟು ಪ್ರಮಾಣದಲ್ಲಿ ಬೆಳೆದಿವೆ.

ಹುಲಿಕೆರೆಯ ಹಿಂಭಾಗದಲ್ಲಿ ಕಲ್ಲೇಶ್ವರ ದೇವಾಲಯವನ್ನು ಕಾಣಬಹುದು. ಈ ಕೆರೆಯ ನೀರನ್ನು ಬಳಸಿಕೊಂಡು ಭತ್ತ, ರಾಗಿ, ಜೋಳ, ಶೇಂಗ, ತೆಂಗು, ಅಡಿಕೆ, ತರಕಾರಿ ಹಾಗೂ ಹಣ್ಣು ಹಂಪಲುಗಳನ್ನು ಬೆಳೆಯುತ್ತಿದ್ದರು ಈ ಕೆರೆಯು ಪುರಾತನ ಕಾಲದಿಂದಲೂ ಇದೆ.

**ಈ ಕೆರೆಯ ಬಗ್ಗೆ ಇರುವ ಐತಿಹ್ಯ**

ಈ ಪ್ರದೇಶದಲ್ಲಿ ಸುತ್ತಲೂ ದಟ್ಟವಾದ ಅಡವಿ ಇದ್ದು ಈ ಕಾನನದ ಮಧ್ಯ ಸಾಕಷ್ಟು ದೊಡ್ಡ ದೊಡ್ಡ ಗುಂಡು ಬಂಡೆಗಳು ಇದ್ದವು. ಇವುಗಳ ಸಂದುಗೊಂದಲಗಳಲ್ಲಿ ಹುಲಿಯೊಂದು ವಾಸವಾಗಿತ್ತು. ಈ ಗುಂಡುಗಳಿರುವ ಪ್ರದೇಶದಲ್ಲಿ ಕೆರೆಯೊಂದನ್ನು ಕಟ್ಟಿಸಲಾಯಿತು. ಹಾಗಾಗಿ ಹುಲಿಕೆರೆ ಎಂದು ಕರೆಯಲಾಗುತ್ತದೆಂದು ಹೇಳುವರು. ಹುಲಿಕೆರೆ ಎಂಬ ಹೆಸರಿನಿಂದಲೂ ಈ ಗ್ರಾಮವನ್ನು ಕರೆಯಲಾಗುತ್ತದೆ. ಆದ್ದರಿಂದ ಕೆರೆಗಳ ನಿರ್ಮಾಣ ಗ್ರಾಮಗಳ ನಿರ್ಮಾಣಕ್ಕೆ ಭದ್ರಬುನಾದಿ ಹಾಕಿದವು ಎನ್ನಬಹುದು. ಈ ಕೆರೆಯ ನೀರು ತುಂಬಿದಾಗ ಬಾಗಿನ ಅರ್ಪಣೆ ಸೇವೆ ಹಾಗೂ ವಿಶೇಷ ಪೂಜೆ ಪುನಸ್ಕಾರ ನಡೆಯುತ್ತವೆ.

**ಲೋಕಿಕೆರೆ**

ಕಾನಾಹೊಸಹಳ್ಳಿ ಹೋಬಳಿಯಿಂದ ೬ ಕಿ.ಮೀ ದೂರದ ಪೂರ್ವಕ್ಕೆ ಲೋಕಿಕೆರೆ ಗ್ರಾಮದಿಂದ ಸ್ವಲ್ಪ ಮುಂದಕ್ಕೆ ಈ ಕೆರೆಯು ಇದೆ. ಈ ಕೆರೆಯು ಪುರಾತನ ಕಾಲದಿಂದಲೂ ಇದೆ ಎನ್ನುವ ಅಭಿಪ್ರಾಯವನ್ನು ಸ್ಥಳೀಯರು ತಿಳಿಸಿದ್ದಾರೆ. ಈ ಕೆರೆಯ ಏರಿಯು ಮಣ್ಣಿನಿಂದ ನಿರ್ಮಾಣಗೊಂಡಿದ್ದು ೨೧.೭೦ ರಷ್ಟು ನೀರಿನ ಸಾಮರ್ಥ್ಯ ಹೊಂದಿದೆ ಹಾಗೂ ೭೯,೦೦ ಹೆಕ್ಟರುಗಳಿಗೆ ನೀರನ್ನು ಒದಗಿಸುವುದು. ಈ ಕೆರೆಯು ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಕೃಷಿ ಮಾಡುವುದು ಇಂದಿಗೂ ಸಹ ಕಾಣಬಹುದು ಲೋಕಿಕೆರೆ ಕೆರೆ ಏರಿಯ ಉದ್ದ ೫೭೩ ಮೀಟರ್ ಹೊಂದಿದೆ. ಈ ಕೆರೆಯ ಒಟ್ಟು ನೀರಿನ ಮಟ್ಟ ೧೦ ಅಡಿಯವರೆಗೂ ಹೊಂದಿದೆ. ಪ್ರಸ್ತುತ ಮಳೆಯ ಪ್ರಮಾಣ ಕಡಿಮೆಯಾಗಿ ನೀರಿನ ಮಟ್ಟ ಖಾಲಿಯಾಗಿದೆ.

ಲೋಕಿಕೆರೆ ಕೆರೆ ಏರಿಯ ಮೇಲೆ ಒಂದು ಶಾಸನವನ್ನು ನೆಟ್ಟಿದ್ದಾರೆ. ಆದರೆ ಕಿಡಿಗೇಡಿಗಳು ಇತ್ತೀಚೆಗೆ ಅದನ್ನು ಕಿತ್ತು ಕೆಳಗೆ ಬಿಸಾಡಿರುವುದು ನನ್ನ ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಇದಕ್ಕೆ ಸಂರಕ್ಷಣೆ ಇಲ್ಲದಿರುವುದು ಒಂದು ವಿಪರ್ಯಾಸವಾಗಿದೆ. ಈ ಕೆರೆಯ ಹಿಂಭಾಗದಲ್ಲಿ ಪೂಜಾರಹಳ್ಳಿಯ ಕಲ್ಲೇಶ್ವರ ದೇವಾಲಯವನ್ನು ಕಾಣಬಹುದು ಇದನ್ನು ಸ್ಥಳೀಯರು ಕಲ್ಲಪ್ಪನ ಬೀಳು ಎಂದು ಕರೆಯುತ್ತಾರೆ. ಕಲ್ಯಾಣ ಚಾಲುಕ್ಯರು ಕೆರೆ ದಂಡೆಗಳ ಮೇಲೆ ದೇವಾಲಯಗಳನ್ನು ನಿರ್ಮಿಸಿರುವುದು ಅವರ ಒಂದು ವಿಶಿಷ್ಟ ಲಕ್ಷಣವಾಗಿದೆ. ಈ ಶಾಸನ ಶ್ರೀರತ್ನಭೋಷಣ ಭಟಾರಕನ ಪ್ರೀತಿಯ ಶಿಷ್ಯ ಲೋಕಯ ಕೆರೆಯ ಮರಗೊಂಡನ ನಿಷದಿ ಎಂದು ತಿಳಿಸುತ್ತದೆ.[೬೨]

**ಚೌಡಾಪುರ ಕೆರೆ**

ಕಾನಾಹೊಸಹಳ್ಳಿ ಹೋಬಳಿ ವ್ಯಾಪ್ತಿಯಲ್ಲಿ ಬರುವ ಚೌಡಾಪುರ ಕೆರೆಯ ಏರಿಯ ಉದ್ದ ೭೦೪ ಮೀಟರ್ ಹೊಂದಿದ್ದು ಮಣ್ಣಿನಿಂದ ಏರಿಯನ್ನು ನಿರ್ಮಿಸಿಕೊಂಡು ಕೆರೆಯ ಒಳಭಾಗದಲ್ಲಿ ಕಲ್ಲಿನಿಂದ ಕಟ್ಟಲಾಗಿದೆ. ಈ ಕೆರೆಯ ನೀರಿನ ಸಾಮರ್ಥ್ಯ ೪೨.೧೨ ರಷ್ಟು ಹೊಂದಿದ್ದು ೬೩ ಹೆಕ್ಟರ್ ಗಳಗೆ ನೀರಿನ ಸೌಲಭ್ಯವಿದೆ. ನೀರಿನ ಮಟ್ಟ ೧೨ ಅಡಿ ಇದ್ದು ಇತ್ತೀಚೆಗೆ ಕೆರೆಯು ಖಾಲಿಯಾಗಿದೆ. ಮಳೆಯಿಲ್ಲದ ಕಾರಣ ಕೆರೆಯು ಬತ್ತಿ ಹೋಗಿದೆ. ಕಾಲುವೆಗಳ ಮೂಲಕ ಕೃಷಿ ಮಾಡಿರುವುದನ್ನು ಕಾಣಬಹುದು.

**ಇಮ್ಮುಡಾಪುರ ಕೆರೆ**

ಕಾನಾಹೊಸಹಳ್ಳಿಯಿಂದ ಐದು ಕಿ.ಮೀ ದೂರದಲ್ಲಿರುವ ಇಮ್ಮಡಾಪುರ ಗ್ರಾಮದ ಕೆರೆಯ ಏರಿಯ ಉದ್ದ ೪೦೪ ಮೀಟರ್ ಹೊಂದಿದ್ದು ಮಣ್ಣಿನಿಂದ ಕಟ್ಟಲಾಗಿದೆ. ಕೆರೆಯ ಒಳಭಾಗದಲ್ಲಿ ಕಲ್ಲಿನಿಂದ ಕಟ್ಟಲ್ಪಟ್ಟಿದೆ ಇದರಿಂದ ಕೆರೆಯಲ್ಲಿ ಸಂಗ್ರಹವಾಗುವ ನೀರನ್ನು ತಡೆಯುತ್ತದೆ. ಆದ್ದರಿಂದ ಈ ಭಾಗವು ಅತ್ಯಂತ ಗಟ್ಟಿಯಾಗಿದೆ. ಕೆರೆ ನಿರ್ಮಾಣ ಕಲ್ಲು ಮಣ್ಣು ಬಳಸಿಕೊಂಡಿದ್ದಾರೆ ಎರಡು ಕಲ್ಲಿನ ಕಂಬಗಳ ಮಧ್ಯದಲ್ಲಿ ಅಡ್ಡಗೋಲನ್ನು ಹಾಕಿ ರಂಧ್ರದ ಮೂಲಕ ಮುಚ್ಚಲಾಗಿದೆ. ತೂಬುಗಳ ಇರುವುದರಿಂದ ನೀರನ್ನು ಅವಶ್ಯಕತೆ ಇದ್ದಾಗ ಬಳಸಬುಹುದು. ಈ ಕೆರೆಯ ನೀರಿನ ಸಾಮರ್ಥ್ಯ ೨೬.೫೪ ಇದ್ದು ೪೦೫ ಹೆಕ್ಟೇರು ಜಮೀನುಗಳಿಗೆ ನೀರಿನ ಸೌಲಭ್ಯ ಒದಗಿಸುತ್ತದೆ. ಕೃಷಿ ಮಾಡಲು ಯೋಗ್ಯವಾದ ಭೂಮಿ ಇದ್ದು ನೀರನ್ನು ಕಾಲುವೆಗಳ ಮೂಲಕ ಹರಿಸಿಕೊಳ್ಳಲಾಗಿದೆ.

**ಉಪ್ಪಾರಹಳ್ಳ**

ಕಾನಾಹೊಸಹಳ್ಳಿ ವ್ಯಾಪ್ತಿಯಲ್ಲಿ ಬರುವ ಕೆಂಚಮಲ್ಲನಹಳ್ಳಿ ಮಾರ್ಗವಾಗಿ ಕಲ್ಲಹಳ್ಳಿಯ ಹತ್ತಿರ ಹರಿಯುವ ಚಿನ್ನಹಗರಿಯನ್ನು ಸೇರುವ ಹಳ್ಳವೇ ಉಪ್ಪಾರಹಳ್ಳ ಎಂದು ಕರೆಯುತ್ತಾರೆ. ಇದು ಪ್ರಾಚೀನ ಕಾಲದಿಂದ ಪ್ರಸಿದ್ಧ ಪಡೆದಿದೆ. ಈ ಹಳ್ಳವು ವಿಶಾಲವಾಗಿದ್ದು ಸುತ್ತಮುತ್ತ ದೊಡ್ಡ ದೊಡ್ಡ ಬಂಡೆಗಳು ಇವೆ. ಈ ಹಳ್ಳದಲ್ಲಿ ಸದಾಕಾಲ ನೀರು ತುಂಬಿರುತ್ತಿತ್ತು ಆದರೆ ಇತ್ತೀಚೆಗೆ ಮಳೆಯ ಪ್ರಮಾಣ ಕಡಿಮೆಯಾಗಿ ಬತ್ತುತ್ತಿದೆ. ಈ ಹಳ್ಳದಲ್ಲಿ ಉಪನ್ನು ತಯಾರಿಸುತ್ತಿದ್ದರು. ಮತ್ತು ಬೇರೆ ಕಡೆಗೆ ಮಾರಾಟ ಮಾಡುತ್ತಿದ್ದರು ಎಂದು ಹೇಳಲಾಗುತ್ತದೆ. ಹಳ್ಳದ ದಂಡೆಯಲ್ಲಿ ಹಲವು ಗಡ್ಡೆಗಳಿಗೆ ಉಪ್ಪಾರಗಡೆ ಎಂದು ಹೆಸರು ಈ ಗಡ್ಡೆಯಲ್ಲಿ ಮಡಿಕೆ ಚೂರುಗಳ ಅವಶೇಷಗಳು ಕಂಡುಬರುತ್ತವೆ. ಈ ಹಳ್ಳದಲ್ಲಿನ ನೀರು ಕೃಷಿಗೆ, ದನಕರುಗಳಿಗೆ ಪ್ರಾಣಿ, ಪಕ್ಷಿಗಳಿಗೆ

ಅನುಕೂಲಕರವಾಗಿದೆ. ಈ ಹಳ್ಳದಲ್ಲಿ ಬೆಳೆಯುವಂತಹ ಅಪು ಎಂಬ ಹುಲ್ಲನ್ನು ಸ್ಥಳೀಯರು ನಿವೇಶನಕ್ಕೆ ಬಳಸಿದ್ದಾರೆ. ಹಳ್ಳದ ಸುತ್ತಮುತ್ತಲಿನ ಜನರಿಗೆ ಕಜ್ಜಿಯಂತಹ ಚರ್ಮಕಾಯಿಲೆಗಳು ಬಂದವರಿಗೆ ಉಪ್ಪಾರ ಹಳ್ಳದಲ್ಲಿ ಸ್ನಾನಮಾಡಿದರೆ ರೋಗ ನಿವಾರಣೆಯಾಗುತ್ತಿತ್ತು ಎಂಬ ನಂಬಿಕೆಯಾಗಿದೆ. ಉಪ್ಪು ತಯಾರಿಸುವ ಹಳ್ಳಕ್ಕೆ ಉಪ್ಪಹಳ್ಳ, ಉಪ್ಪಾರಹಳ್ಳ, ಎಂದು ಕರೆಯುವುದು ಇಂದು ಸಹ ಪ್ರಚಲಿತದಲ್ಲಿದೆ.

**ಬಾವಿಗಳು**

ಅರಸರು, ಅಧಿಕಾರಿಗಳು ಮತ್ತು ಶ್ರೀಮಂತ ವರ್ಗದ ಜನರು ಸಾಮಾಜಿಕ ಧಾರ್ಮಿಕ ಮತ್ತು ಆರ್ಥಿಕ ಕಾರಣಗಳಿಗಾಗಿ ಬಾವಿಗಳನ್ನು ಕಟ್ಟಿಸಿದ ಉಲ್ಲೇಖಗಳು ದೊರೆಯುತ್ತವೆ. ಅಶೋಕನ ಸಹ ರಸ್ತೆ ಮಾರ್ಗದಲ್ಲಿ ಪಶುಗಳಿಗಾಗಿ, ಮನುಷ್ಯರಿಗಾಗಿ, ನೆರಳಿಗಾಗಿ ಆಲದ ಮರಗಳನ್ನು ನೆಡಲಾಗಿದೆ. ಅರವಟ್ಟಿಗೆಗಳನ್ನು ಇಡಲಾಗಿದೆ. ದಯೆ, ದಾನ, ಶುಚಿ, ಸತ್ಯ, ಪ್ರಸನ್ನತೆ ಇವುಗಳಿಂದ ಧರ್ಮಕಾರ್ಯ, ಧರ್ಮಾಚರಣೆಗಳು ಜನರಲ್ಲಿ ಹೆಚ್ಚುತ್ತಿವೆ. ಹಾಗಾಗಿ ಬಾವಿ, ಕೆರೆಗಳ ಕಟ್ಟಿಸಿ ಅವುಗಳ ಸಂರಕ್ಷಣೆ ಭೂಮಿ ಹಣ ದಾನ ನೀಡಿದ ಉದಾಹರಣೆಗಳು ವಿಜಯನಗರದ ಕಾಲದವರೆಗೂ ನಡೆದು ಬಂದಿರುವುದು ಆಯಾ ಕಾಲದ ಶಾಸನಗಳಿಂದ ತಿಳಿದು ಬರುತ್ತದೆ.[೪೩] ಸಂಸ್ಕೃತ ವಿಶ್ವಕೋಶ ಮಾನಸೋಲ್ಲಾಸದಲ್ಲಿ ಬಾವಿಗಳನ್ನು ಕೊಪ, ವಾಡಿ, ಮತ್ತು ಪುಷ್ಕರಣಿ ಎಂದು ವರ್ಗಿಕರಿಸಲಾಗಿದೆ. ಕಾನಾಹೊಸಹಳ್ಳಿ ಪರಿಸರದಲ್ಲಿ ಅನೇಕ ಬಾವಿಗಳನ್ನು ಕಾಣಬಹುದು.

**ಕಪಿಲೆಯ ಬಾವಿ**

ಕಾನಾಹೊಸಹಳ್ಳಿ ಹೋಬಳಿ ಕೇಂದ್ರದಿಂದ ೧೩ ಕಿ.ಮೀ ದೂರದ ತೊರೆಕಲ್ಲಹಳ್ಳಿ ಗ್ರಾಮದ ದಕ್ಷಿಣಕ್ಕಿರುವ ಜಿನ್ನಿಗಿ ಹಳ್ಳದ ಪಕ್ಕದಲ್ಲಿ ಕಪಿಲೆಯ ಬಾವಿಯನ್ನು ಕಾಣಬಹುದು ಇದರ ಪಕ್ಕದಲ್ಲಿ ಮಾಗಣಿ ಇದ್ದು ಗೊಲ್ಲರಹಟ್ಟಿಯ ಜಮೀನುಗಳನ್ನು ಕಾಣುತ್ತೇವೆ. ಮಳೆ ಬಂದಾಗ ಜಿನ್ನಿಗಿ ಹಳ್ಳದ ನೀರು ಬಂದು ಈ ಬಾವಿಯಲ್ಲಿ ಸೇರುತ್ತಿತ್ತು ಸದಾ ಕಾಲ ನೀರಿನಿಂದ ಕೂಡಿರುತ್ತಿತ್ತು ಹಾಗಾಗಿ ಕೃಷಿಗೆ ಈ ಬಾವಿಯ ನೀರನ್ನು ಬಳಸಿಕೊಳ್ಳಲು ಬಾವಿಯ ಪಕ್ಕದ ಗೋಡೆಗಳ ಮೇಲೆ ಎರಡು ಕಲ್ಲಿನ ಕಂಬಗಳ ಮೇಲೆ ಒಂದು ತೊಲೆಯನ್ನು ಹಾಕಿ ಅದಕ್ಕೆ ಸಾಮಾನ್ಯವಾದ ಚಕ್ರ ಅಥವಾ ಗಾಲಿಯನ್ನು ಜೋಡಿಸುತ್ತಾರೆ. ಗಾಲಿಯ ಮೇಲೆ ಚಲಿಸುವ ಹಗ್ಗದ ಕೆಳಗಿನ ಕೊನೆಯನ್ನು ಕಪಿಲೆಗೂ ಇನ್ನೋದು ಕೊನೆಯನ್ನು ಮೇಲ್ಗಡೆಯ ನೊಗಕ್ಕೆ ಕಟ್ಟಿರುತ್ತಾರೆ. ಅದಕ್ಕೆ ಎತ್ತುಗಳನ್ನು ಕಟ್ಟಿ ತುಂಬಿದ ಬುಟ್ಟಿಯನ್ನು ಮೇಲೆತ್ತುವಾಗ ಇಳಿಜಾರಾದ ದಾರಿಯಲ್ಲಿ ಇಳಿಯುತ್ತವೆ.

ಬುಟ್ಟಿಯ ಮೇಲಕ್ಕೆ ಬಂದು ಒಬ್ಬ ಆಳು ನೀರಿನ ನಾಲೆಕಡೆ ತಿರಿಗಿಸುತ್ತಾನೆ ನೀರು ಖಾಲಿಯಾದ ಬುಟ್ಟಿಯನ್ನು ಬಾವಿಯಾಳಕ್ಕೆ ಪುನಃ ಇಳಿಸುವಾಗ ಎತ್ತುಗಳು ಏರಿಯ ಮೇಲಕ್ಕೆ ಹತ್ತಬೇಕು. ಬುಟ್ಟಿಯ ಬಳಿಯಲ್ಲಿ ಒಬ್ಬ ಆಳಲ್ಲದೆ ಎತ್ತುಗಳನ್ನು ನಡೆಸುವುದಕ್ಕೆ ಮತ್ತೊಬ್ಬ ಆಳು ಬೇಕು. ಬುಟ್ಟಿಯಿಂದ ೫೦ ರಿಂದ ೬೦ ಅಡಿ ಆಳದ ಬಾವಿಗಳಿಂದ ನೀರನ್ನು ಹೆಚ್ಚು ಶ್ರಮವಿಲ್ಲದೆ ಎತ್ತಬಹುದು. ಹಾಗೆ ಮೇಲಕ್ಕೆ ಎತ್ತಿರುವ ನೀರನ್ನು ಕಾಲುವೆ ಮೂಲಕ ಹರಿಸಿ ನೀರಾವರಿ ವ್ಯವಸ್ಥೆ ಮಾಡಿಕೊಂಡಿರುವುದಕ್ಕೆ ಇಲ್ಲಿರುವ ಕಾಲುವೆಗಳು, ಮಾಗಣಿ, ಹಾಗೂ ಕಪಿಲೆಬಾವಿ ಸಾಕ್ಷಿಯಾಗಿವೆ. ಕಪಿಲೆಯ ಬಾವಿಗೆ ಮೆಟ್ಟಿಲುಗಳು ಇರುವುದಿಲ್ಲ, ಈ ರೀತಿಯಾದ ಕಪಿಲೆ ಬಾವಿಗಳು ಕಲ್ಲಹಳ್ಳಿಯಲ್ಲಿ ನಾಲ್ಕು ಕಂಡುಬಂದಿವೆ. ಹಾಗೂ ಕಾನಾಹೊಸಹಳ್ಳಿ ಪರಿಸರದಲ್ಲೂ ಸಹ ಕಾಣಬಹುದು.

**ಕಾನಾಮಡುಗು ಮಠದಲ್ಲಿರುವ ಬಾವಿ**

ಶರಣಬಸವೇಶ್ವರ ದೇವಾಲಯದ ಹಿಂಭಾಗದಲ್ಲಿರುವ ಬಾವಿಯು ಚೌಕಾಕಾರವಾಗಿದ್ದು ಕೆಳಗೆ ಇಳಿಯಲು ಮೆಟ್ಟಿಲುಗಳು ಇವೆ. ಸುಮಾರು ೩೦ ಅಡಿ ಆಳವಾಗಿದ್ದು ಸದಾಕಾಲ ನೀರು ತುಂಬಿಕೊಂಡಿರುತ್ತದೆ. ಸುತ್ತಲೂ ಕಲ್ಲಿನ ಗೋಡೆಯನ್ನು ಕಟ್ಟಲಾಗಿದೆ. ದೇವಾಲಯದ ಕಾರ್ಯಗಳಿಗೆ ಈ ನೀರನ್ನು ಬಳಸಲಾಗುತ್ತದೆ. ಇತ್ತೀಚಿಗೆ ನೀರು ಇಲ್ಲದೆ ಬತ್ತಿಹೋಗಿ ಮಣ್ಣು ತುಂಬಿಕೊಂಡು ಅರ್ಧಭಾಗವು ಹಾಳಾಗಿದೆ. ಮತ್ತೊಂದು ಬಾವಿ ದೇವಾಲಯದ ಮುಂಭಾಗದಲ್ಲಿದೆ. ೧೦ ಅಡಿ ಚೌಕಾಕಾರ ಬಾವಿಯ ಪಕ್ಕದ ಎರೆಡು ಕಡೆಗೆ ಕಂಬಗಳು ನೆಟ್ಟು ಮೇಲೆ ಭಾಗದಲ್ಲಿ ತೊಲೆಯಾಗಿ ಅದಕ್ಕೆ ಚಕ್ರದ ಗಾಲಿಯನ್ನು ಹಾಕಿದ್ದಾರೆ ನೀರು ತುಂಬಿಕೊಳ್ಳಲು ಸಹಾಯಕ ವಾಗುತ್ತದೆ. ಈ ಬಾವಿಗೆ ಶರಣಪ್ಪನ ಬಾವಿ ಎಂದು ಕರೆಯುತ್ತಾರೆ.

**ಶರಣಪ್ಪನಬಾವಿಯ ಐತಿಹ್ಯ**

ಕಾನಾಮಡುಗು ಶ್ರೀ ಶರಣಬಸವೇಶ್ವರರ ಪುಣ್ಯಕ್ಷೇತ್ರ ಹಾಗೂ ಶರಣರ ನೆಲೆವೀಡು ಇಲ್ಲಿ ಸದಾ ದಾಸೋಹ ನಡೆಯುವುದು. ಕಾಯಕದಲ್ಲಿ ಕೈಲಾಸ ಎನ್ನುವ ತತ್ವವನ್ನು ಉಳಿಸಿಕೊಂಡು ಬೆಳೆಸುತ್ತಾ ಬಂದವರು ಇಲ್ಲಿನ ಶರಣಾರ್ಯರು ಅವರು ಮಠದಲ್ಲಿ ಸುಶಿಕ್ಷಿತ ನಡೆನುಡಿಗೆ ಮತ್ತು ಶಿಕ್ಷಣಕ್ಕೆ ಸದಾ ಆದ್ಯತೆಯನ್ನು ಬಳಸಿಕೊಂಡು ಬರುತ್ತಿರುವ ಶರಣಾರ್ಯರ ಮಠದಲ್ಲಿ ಒಂದು ಬಾರಿ ಜಾತ್ರೆಯಲ್ಲಿ ದಾಸೋಹ ನಡೆಯುತ್ತಿತ್ತು ಭಕ್ತರು ಸ್ವಾಮಿಯ ಕೃಪೆಗಾಗಿ ಬಂದವರು ಪ್ರಸಾದ ಸೇವಿಸುತ್ತಿದ್ದರು ಹೀಗೆ ದಾಸೋಹ ಸಮಯದಲ್ಲಿ ಭಕ್ತರ ಪ್ರಸಾದಕ್ಕೆ ತುಪ್ಪ ಸಾಲದು ಬಂತು ಪ್ರಸಾದ ಉಣ ಬಡಿಸುವರು ಶರಣಾರ್ಯರಿಗೆ ವಿಷಯ ತಿಳಿಸಿದರು ಕೂಡಲೇ ಬಾವಿಯಿಂದ ಒಂದು ಕೊಡ ನೀರನ್ನು ತರಿಸಿ ತಮ್ಮ ದೈವಾಂಶ ಸಿದ್ದಿಯಿಂದ ತುಪ್ಪವನ್ನಾಗಿ ಮಾರ್ಪಡಿಸಿದರು.

ಭಕ್ತ ಸಮೂಹಕ್ಕೆ ತುಪ್ಪ ಉಣಬಡಿಸಿದರು ಕೊನೆಗೂ ತುಪ್ಪದ ಕೊಡ ಹಾಗೆಯೇ ಉಳಿದಿತ್ತು ಅದನ್ನು ಅದೇ ಬಾವಿಯಲ್ಲಿ ಗಂಗೆಗೆ ಅರ್ಪಿಸಿದಂತೆ ಈ ಬಗೆಯಲ್ಲಿ ಶರಣಾರ್ಯರು ಪವಾಡ ಮಾಡಿದ ಬಾವಿಗೆ ಇಂದು ಶರಣಪ್ಪನ ಬಾವಿ ಎಂದು ಕರೆಯುತ್ತಾರೆ. ಆದರೆ ಇಂದು ಬಾವಿಯಲ್ಲಿ ಮಿತಪ್ರಮಾಣದ ಮಳೆಯಿಂದಾಗಿ ನೀರು ಬತ್ತುತ್ತಾ ಬಂದಿದೆ.

**೩.೪ ಸ್ಮಾರಕ ಶಿಲ್ಪಗಳು**

ಹುಟ್ಟು ಆಕಸ್ಮಿಕ ಸಾವು ಖಚಿತ ಎಂಬುವಂತೆ ಮಾನವನು ಭೂಮಿಯ ಮೇಲೆ ಜನಿಸಿದ ನಂತರ ಅವರಿಗೆ ಸಾವು ಎಂಬುದು ಅನಿವಾರ್ಯವಾಗಿದೆ. ಈ ಸಾವಿನ ಅರ್ಥ, ಕಲ್ಪನೆ, ಮುಂತಾದ ವ್ಯಾಖ್ಯಾನಗಳು ವ್ಯಕ್ತಿಯಿಂದ ವ್ಯಕ್ತಿಗೆ, ಸಂಸ್ಕೃತಿಯಿಂದ ಸಂಸ್ಕೃತಿಗೆ, ಕಾಲದಿಂದ ಕಾಲಕ್ಕೆ ಬದಲಾವಣೆಯಾಗುತ್ತಾ ಹೋಗುವುದನ್ನು ಕಾಣಬಹುದು.[೪೪] ಮಾನವನಿಗೆ ಬರುವ ಎಲ್ಲಾ ಕಷ್ಟಗಳಿಗಿಂತಲೂ ಸಾವಿನ ಭಯ ಎಂಬುದು ಅವರ ಜೀವನದಲ್ಲಿ ಅಲ್ಲೋಲ ಕಲ್ಲೋಲವನ್ನು ಉಂಟುಮಾಡುವ ಸಂಗತಿಯಾಗಿದೆ. ಸತ್ತ ಆತ್ಮದ ಪ್ರೀತಿ, ಮತ್ತೆ ಮರಳಿ ಬರದ ಬಗೆಗಿನ ಭೀತಿ ಅವನಲ್ಲುಂಟಾಗುತ್ತದೆ. ಪರಸ್ಪರ ವಿರುದ್ಧವಾದ ಅವನ ಈ ಭಾವನೆಗಳು ಅವನ ಶವವನ್ನು ರಕ್ಷಿಸಿಟ್ಟ ವಿವಿಧ ರೀತಿಗಳು ಸಮಾಧಿ ಮಾಡುವುದು ಸುಡುವುದು ಮುಂತಾದ ಸಂಪೂರ್ಣ ನಿರ್ನಾಮ ಮಾಡುವ ರೀತಿಗಳಲ್ಲಿ ಮುಕ್ತವಾಗಿದೆ.[೪೫]

ಪ್ರಾಚೀನ ಭಾರತದಲ್ಲಿ ಅನೇಕ ರೀತಿಯ ಶವಸಂಸ್ಕಾರವನ್ನು ಕಾಣುತ್ತೇವೆ ಆ ಸಮಾಧಿಗಳ ಮುಂದೆ ನೀಡುವ ಬಲಿ, ಕಾಣಿಕೆಗಳು ಸತ್ತವರ ಗೌರವಾರ್ಥವಾಗಿ ನಿಲ್ಲಿಸಿರುವ ಸ್ಮಾರಕಗಳು ಇವುಗಳೆಲ್ಲವನ್ನು ಗಮನಿಸಿದಾಗ ಎಲ್ಲವು ಒಂದೇ ಎಂಬ ಭಾವನೆ ಬರುತ್ತದೆ. ಸಾವಿನ ಬಗ್ಗೆ ಮಾನವನ ಮೂಲಭೂತ ಭಾವನೆಗಳು ಒಂದೇ ಆಗಿರುವುದರಿಂದ ಅವನು ಅದರ ಬಗ್ಗೆ ತನಗಿರುವ ಭೀತಿಯ ಅಭಿವ್ಯಕ್ತಿಯಲ್ಲಿಯೂ ಸೌಮ್ಯವನ್ನು ತೋರಿಸಿದ್ದಾನೆ.[೪೬]

ಮಾನವನಲ್ಲಿ ನಾಗರೀಕತೆ ಸಂಸ್ಕೃತಿಯ ಆರಂಭಿಕ ಕಾಲದಿಂದಲೂ ಅವುಗಳ ಬೆಳವಣಿಗೆಯ ಜೊತೆ ಜೊತೆಯಲ್ಲಿ ಸಾವಿನ ಬಗ್ಗೆ ಸಾವಿನ ನಂತರದ ಬಗ್ಗೆ ಹಲವಾರು ನಂಬಿಕೆಗಳನ್ನು ಬೆಳೆಸಿಕೊಂಡು ಬಂದಿದ್ದಾನೆ. ಒಂದು ಸಮುದಾಯದ ಮುಖಂಡ, ಹಿರಿಯರು, ನಾಯಕರು, ವೀರರು ಮುಂತಾದ ಲೌಕಿಕ ಜೀವನದಲ್ಲಿ ಪ್ರಭಾವ ಶಾಲಿಗಳಾಗಿರುವ ವ್ಯಕ್ತಿಗಳು ಮರಣದ ನಂತರವೂ ತಮ್ಮ ಪ್ರಭಾವವನ್ನು ಉಳಸಿಕೊಳ್ಳುತ್ತಾರೆ. ಅವರ ಭೌತಿಕ ದೇಹ ನಶಿಸಿ ಹೋಗಿದ್ದರೂ ಅವರ ಆತ್ಮ ಬದುಕಿರುವ ತಮಗೆ ಒಳ್ಳೆಯದನ್ನು ಅಥವಾ ಕೆಟ್ಟದ್ದನ್ನು ಮಡುವ ಶಕ್ತಿಯನ್ನು ಪಡೆದಿದೆ ಎಂಬ ನಂಬಿಕೆ ಮರಣ ಹೊಂದಿದ ಹಿರಿಯರನ್ನು ಮುಂದಿನ

ಪೀಳಿಗೆಯವರು ಸ್ಮರಿಸಬೇಕು ಎಂಬ ಭಯ ಮಿಶ್ರಿತ ಗೌರವ ನೀಡುವ ಭಾವ, ಸತ್ತ ಹಿರಿಯರು ಮತ್ತೆ ತಮ್ಮ ಮನೆಯಲ್ಲಿಯೇ ಪುನಃ ಜನ್ಮವಾಗುತ್ತಾರೆ ಎಂಬುದು ನಂಬಿಕೆ

ಮರಣ ಹೊಂದಿದ ಮಾನವನನ್ನು ಸಮಾಧಿ ನಿರ್ದಿಷ್ಟ ಸ್ಥಳದ ಗುರುತಿಗಾಗಿಯೇ ಮಡಿದವನ ಸ್ಮರಣೆ ಬೀರುವಂತೆ ಕೆಲವರು ಸಂಕೇತಗಳನ್ನು ಗುರುತುಗಳನ್ನು ಒಂದು ನಿಗದಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ಮಾಡುತ್ತಿದ್ದರು. ಇವು ಸಾಮಾನ್ಯವಾಗಿ ಆಯಾ ಪ್ರದೇಶಗಳ ನಂಬಿಕೆ, ಸಾಮಾಜಿಕ ಪ್ರತಿಷ್ಠೆಗಳನ್ನು ಸೇರಿಸಿಯೇ ಬೆಳೆದಿದೆ ಸ್ಮಾರಕಗಳು ಮಾನವನ ಜೀವನದ ಧೋರಣೆಗಳ ಕುರಿತು ಜೀವನದ ವಿಧಾನವನ್ನು ಕುರಿತು ಮಾಹಿತಿ ನೀಡುವ ಕುರುಹುಗಳಾಗಿವೆ.

ಎಲ್ಲಾ ಸ್ಮಾರಕಗಳು ಸತ್ತ ವ್ಯಕ್ತಿಯ ನೆನಪನ್ನುಂಟು ಮಾಡಲು ಇರುವ ಸಂಕೇತಗಳು ಸತ್ತ ವ್ಯಕ್ತಿಯ ನೆನಪನ್ನು ಅಭಿವ್ಯಕ್ತಿಗೊಳಿಸುವ ಸಾಧನಗಳು ಇದಕ್ಕೆ ಕಾರಣವೆಂದರೆ ಈ ಎಲ್ಲಾ ಸಾಧನೆಗಳು ನಿರ್ದಿಷ್ಟವಾದ ಸಂಕೇತಗಳಾಗಿದ್ದು ಅವು ಪರಂಪರಾಗತವಾಗಿ ಮಾಡಿಕೊಂಡಂತವು ಎಂಬುವುದು ಈ ಎಲ್ಲಾ ಸಂಕೇತಗಳು ಸಾರ್ವತ್ರಿಕ ಅಲ್ಲ ಆಯಾ ಸಂಸ್ಕೃತಿಗಳ ಜನರ ನಂಬಿಕೆ ಮತ್ತು ಕಲ್ಪನೆ ಪರಿಸರಗಳನ್ನು ಅವಲಂಬಿಸಿರುವಂತವು ಸ್ಮಾರಕ ಕಲ್ಲುಗಳನ್ನು ನೆಡುವುದು ಮುಖ್ಯ ಆಚರಣೆಯಾಗಿತ್ತು.

**ವೀರಗಲ್ಲುಗಳು**

ರಾಜರು ಕಾಲದಿಂದ ಕಾಲಕ್ಕೆ ಆಡಳಿತ ನಡೆಸಿರುವುದಕ್ಕೆ ಇತಿಹಾಸವೆಂಬ ಭಾವನೆ ಬಹಳ ಪ್ರಚಲಿತವಾಗಿದೆ. ಜನರು ಬಾಳಿ ಬದುಕಿರುವ ರೀತಿ ಅನುಸರಿಸಿದ ಧರ್ಮ ಬೆಳೆಸಿದ ಕಲೆ ಅವರ ಜೀವನ ಸಮಸ್ಯೆಗಳು ಅವರ ಜೀವನದ ಮೌಲ್ಯಗಳನ್ನು ಇತ್ಯಾದಿಗಳ ವಿವರಣೆಗೆ ಆ ದೇಶ ಮತ್ತು ಜನತೆಯ ಇತಿಹಾಸ.[೪೭] ಈ ರೀತಿಯ ಇತಿಹಾಸವನ್ನು ಒದಗಿಸುವಲ್ಲಿ ವೀರಗಲ್ಲುಗಳು ಬಹಳ ಪ್ರಮುಖವಾದವು. ನಿಧನವಾದ ವ್ಯಕ್ತಿಯನ್ನು ಅಥವಾ ಸಂಸ್ಕಾರ ಮಾಡಿದ ನಿರ್ದಿಷ್ಟ ಸ್ಥಳದ ಗುರುತಿಗಾಗಿಯೇ ಮಡಿದವರ ಸ್ಮರಣಾರ್ಥವಾಗಿಯೇ ಕೆಲವರು ಸಂಕೇತಗಳನ್ನು ಗುರುತುಗಳನ್ನು ಒಂದು ನಿಗದಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಇವು ಸಾಮಾನ್ಯವಾಗಿ ಆಯಾ ಪ್ರದೇಶಗಳಲ್ಲಿನ ಧರ್ಮ, ನಂಬಿಕೆ, ಸಾಮಾಜಿಕ ಪ್ರತಿಷ್ಠೆಗಳನ್ನು ಅನುಸರಿಸಿಯೇ ಬೆಳೆದಿದೆ.

ಪ್ರಪಂಚದಾದ್ಯಂತ ಇಂತಹ ಸ್ಥಳಗಳ ಮೇಲೆ ತಮ್ಮದೇ ಆದಂತಹ ಸ್ಮಾರಕಗಳನ್ನು ಕಟ್ಟಿರುವುದನ್ನು ಕಾಣಬಹುದು.[೪೮] ವೀರರು ತಮ್ಮ ಸ್ವಾರ್ಥಕ್ಕಾಗಿ ಮಡಿಯದೆ ಸಮಾಜದ ಒಳಿತಿಗಾಗಿ ಪ್ರಾಣತ್ಯಾಗ ಮಾಡಿದ್ದರಿಂದ ಇವರ ಸ್ಮರಣಾರ್ಥವಾಗಿ ಮಾಡಿರುವ ಸ್ಮಾರಕ ಶಿಲ್ಪಗಳೇ

ವೀರಗಲ್ಲುಗಳು[೪೯] ಅಂದರೆ ಇಚ್ಛಾಮರಣವನ್ನು ಆಹ್ವಾನಿಸಿದವರ ಗೌರವಾರ್ಥವಾಗಿ ನೆಟ್ಟ ನಿಶಧಿಗಳ ಜೊತೆ ಜೊತೆಗೆ ರಣರಂಗದಲ್ಲಿ ಮಡಿದ ಯೋಧರ ವೀರಗಲ್ಲಗಳು ಸೇರಿಕೊಳ್ಳತೊಡಗಿದ ವೆಂದರ್ಥ. ಯುದ್ಧವನ್ನು ತೀವ್ರವಾಗಿ ಪ್ರೀತಿಸಿ ಕೊನೆಯುಸಿರಿರುವವರೆಗೂ ಕಾದಾಡಿದ ಮಾನವಗಂಧ ಹಸ್ತಿಪಟ್ಟುಗನ ವೈರಿ ಸೈನ್ಯಕ್ಕೆ ಕಠೋರನಾದ ಬೋಯಿಗನ ಬಾಗಿಯೂರಲ್ಲಿ ವೀರ ಮರಣ ಹೊಂದಿದ ಸಾವಿಯಬ್ಬೆಯ ವೀರಗಲ್ಲುಗಳು ಇದಕ್ಕೆ ನಿದರ್ಶನಗಳು[೫೦] ಅವರು ಮಾಡಿದ ಹೋರಾಟ ಇಂದಿನ ತಮ್ಮ ದೃಷ್ಟಿಯಲ್ಲಿ ಏನಾದರೂ ಆಗಿರಲಿ ಸಮಾಜದ ಒಳಿತಿಗಾಗಿ ಜೀವನ ಹಂಗನ್ನು ತೊರೆದ ಅವರ ನಿಷ್ಠೆ ಸ್ವಾಮಿಭಕ್ತಿ, ಧೀಮಂತಿಕೆ, ಸ್ವಾಭಿಮಾನಗಳಿಂದ ಕೂಡಿದುದಾಗಿದೆ.

ಸಂಖ್ಯೆ : ೦೧

ಶಿಲ್ಪ : ಮಾಸ್ತಿಗಲ್ಲು

ಊರು : ಕಾನಾಮಡುಗು

ಸ್ಥಳ : ಗ್ರಾಮದ ಮಧ್ಯ

ಕಾಲಮಾನ : ಕಲ್ಯಾಣ ಚಲುಕ್ಯರು

ಕಾನಾಹೊಸಹಳ್ಳಿ ಹೋಬಳಿ ಕೇಂದ್ರದಿಂದ ದಕ್ಷಿಣಕ್ಕೆ ೮ ಕಿ.ಮೀ ದೂರದಲ್ಲಿರುವ ಕಾನಾಮಡುಗು ಎಂಬ ಗ್ರಾಮದ ಬಸ್ಸು ನಿಲ್ದಾಣದಿಂದ ಪೂರ್ವದ ಬೇವಿನ ಮರವಿರುವ ಕಟ್ಟೆಯ ಮೇಲೆ ಈ ಮಹಾಸತಿಗಲ್ಲು ಕಾಣಬಹುದು. ಒಂದು ಕಾಲದಲ್ಲಿ ಈ ಪ್ರದೇಶದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಾಡು ಇತ್ತೆಂದು ತಿಳಿದುಬಂದಿದೆ. ಕಾಡಿನ ಪೊದೆಗಳ ಮತ್ತು ಮಠಗಳ ನಡುವಿನ ಗ್ರಾಮಕ್ಕೆ ಕಾನಾನಮಡುವು ಎಂಬ ಹೆಸರು ರೂಢಿಗತವಾಗಿರಬೇಕು ಇತ್ತೀಚೆಗೆ ಕಾನಾಮಡುಗು ಎಂದು ಸ್ಥಳಿಯರು ಕರೆಯುತ್ತಾರೆ. ಈ ಹಳ್ಳಿಯ ಪ್ರಮುಖ ದೇವತೆ ಮಾಸ್ತ್ಯಮ್ಮ ಈ ಹಳ್ಳಿಯವರು ಅವಳಗೆ ಮಾಸ್ತ್ಯಮ್ಮನೆಂದು ಕರೆಯುವರು ಈ ಮಹಾಸತಿಗಲ್ಲು ಕಪ್ಪುಶಿಲೆಯಿಂದ ನಿರ್ಮಿಸಲಾಗಿದೆ. ಈ ಮಹಾಸತಿಗಲ್ಲು ಸುಮಾರು ನಾಲ್ಕು ಅಡಿಗಳಷ್ಟು ಉದ್ದವಾಗಿದ್ದು ಸುಮಾರು ಮೂರು ಅಡಿಗಳಷ್ಟು ಅಗಲವಾಗಿದೆ. ಮಾಸ್ತಿಕಲ್ಲಿನ ಪಕ್ಕದಲ್ಲಿ ವೀರಗಲ್ಲು ಕಟ್ಟೆಯ ಕೆಲಗಡೆ ಇನ್ನೊಂದು ವೀರಗಲ್ಲು ಇವೆ.

ಬಲಗೈಯನ್ನು ಮೇಲಕ್ಕೆ ಎತ್ತಿ ಹಿಡಿದು ಮಾಸ್ತಿಯ ಕೈಯಲ್ಲಿ ಬಳೆ, ಕಡಗಗಳು ಇವೆ. ಎಡಗೈಯಲ್ಲಿ ನಿಂಬೆಹಣ್ಣನ್ನು ಹೆಬ್ಬೆಟ್ಟು ಮತ್ತು ಮೊದಲ ಬೆರಳ ನಡುವೆ ಹಿಡಿದಿದ್ದಾಳೆ ಕೊರಳಲ್ಲಿ ಹಾರಗಳನ್ನು ಧರಿಸಿ ಈಕೆ ಕಿವಿಯಲ್ಲಿ ಜೋತಾಡುವ ಬೆಂಡೋಲೆಗಳನ್ನು ಧರಿಸಿದ ಹಾಗೆ ಕಾಣುತ್ತದೆ. ಜಡೆಯನ್ನು ಅಲಂಕರಿಸಿ ಹಿಂದಿ ಸುತ್ತಲೂ ನಿಲ್ಲಿಸಿದ ಕೇದಿಗೆ ಹೂವಿನ ಚಿತ್ರ ಬಿಡಿಸಿದೆ.

ಮೇಲ್ಭಾಗದಲ್ಲಿ ಪತಿ ಹಾಗೂ ಸತಿ ಸ್ವರ್ಗ ಲೋಕಕ್ಕೆ ಹೋಗುತ್ತಿರುವ ಸೂಚಕವಾಗಿಯೇ ಕುಳಿತು ಇಬ್ಬರನ್ನು ಕೆತ್ತಲಾಗಿದೆ. ಮೇಲಿನ ಭಾಗದಲ್ಲಿ ಸೂರ್ಯ, ಚಂದ್ರ, ನಂದಿ, ಶಿವಲಿಂಗವನ್ನು ಕೆತ್ತಲಾಗಿದೆ.

ಈ ಮಹಾಸತಿ ಬಗ್ಗೆ ಇರುವ ಐತಿಹ್ಯ

ಈ ಮಾಸ್ತ್ಯಮ್ಮ ಮಲೆನಾಡ ಹೆಣ್ಣು. ಇವಳ ತವರ ಮನೆ ದುರ್ಗದ ಹತ್ತಿರ ಮಾನಂಗಿ, ಗಂಡನ ಮನೆ ಸಂಡೂರು ಕಡೆ ಇರುವ ಮಲೆ ತುಂಬರಗುದ್ದಿಯಾಗಿದೆ. ಗಂಡ ಬಲೇ ವ್ಯಭಿಚಾರಿ, ಗೋವುಗಳನ್ನು ಹೊಡೆದುಕೊಂಡು ಹೋಗುವ ಅವುಗಳನ್ನು ಕಾಯದೇ ಬೇರೆ ಹೆಂಗಸರ ಕೂಡ ಸಂಗ ಮಾಡುತ್ತಿದ್ದ. ಹೀಗಾಗಿ ಗೋವುಗಳನ್ನು ಹುಲಿ ತಿನ್ನುತ್ತಿತ್ತು. ಒಂದು ದಿನ ದೊಟ್ಟ ಬೀಜದ ಹೋರಿಯನ್ನು ಹುಲಿ ಮುರಿದು ಬಿಟ್ಟಿತು. ಮಾಸ್ತಮ್ಮ ಗಂಡನನ್ನು ಮೊಸರು ಕಡೆಯುವ ಕೋಲಿನಿಂದ ತಿವಿದು ಬೈದಳು ಗಂಡನ ಕಡೆಯವರಿಗೆ ಇದು ಸಹಿಸಲಾಗದ ಅವಮಾನವಾಯಿತು, ಅವಳನ್ನು ಹೊಡೆದು ಬುದ್ಧಿ ಕಲಿಸಲು ತಯಾರಾದರು. ಮಾಸ್ತ್ಯಮ್ಮನಿಗೆ ಇದು ಗೊತ್ತಾಗಿ ಅಲ್ಲಿಂದ ಓಡಿದಳು ಒಬ್ಬ ಬುಡುಬುಡಿಕೆಯವನ ಜೇಬಿನಲ್ಲಿ ಬಟ್ಟೆಯ ಬೊಂಬೆಯಾಗಿ ಕುಳಿತಳು, ಬುಡುಬುಡಿಕೆಯವನು ಕಾನಾಮಡುಗಿಗೆ ಬಂದು ಕಾನಾಮಡುವಿನ ಮುಖ್ಯಸ್ಥರ ಕನಸಿನಲ್ಲಿ ಅವಳ ಪೂರ್ಣ ಇತಿಹಾಸ ಕಂಡಿತು. ಅವಳು ಬಹುಪತಿವ್ರತೆಯೆಂದು ತಿಳಿಯಿತು. ಕನಸಿನಲ್ಲಿ ಅವಳು ತನ್ನ ರಕ್ಷಣೆ ಮಾಡಿದರೆ ತಾನು ಊರಿನ ರಕ್ಷಣೆ ಮಾಡುವುದಾಗಿ ಹೇಳಿದಳು.

ಗಂಡನ ಮನೆಯವರು ಇವಳಿಗೆ ರಕ್ಷಣೆ ಕೊಟ್ಟಿದ್ದಕ್ಕೆ ಹೋರಾಟ ಮಾಡಲು ಬಂದರು ಈ ಊರಿನವರೂ ಹೋರಾಡಿ ಸೋಲಿಸಿ ಕಳಿಸಿದರು ಇಲ್ಲಿ ಇರುವ ವೀರಗಲ್ಲು ಈ ಕಥೆಗೆ ಪೂರಕವಾಗಿವೆ.[೫೧] ಮಾಸ್ತ್ಯಮ್ಮ ಕೊಂಡಕ್ಕೆ ಬಿದ್ದಳು. ಅವಳ ಪತಿವ್ರತೆಯ ಸೂಚಕವಾಗಿ ಬಾವಿಯಲ್ಲಿ ಭಂಡಾರದ ಭರಣಿ, ನಿಂಬೆ, ಕುಂಕುಮ, ಹೊಂಬಾಳೆ ಮುಂತಾದವು ತೇಲಿದವು.

**ಈ ಮಹಾಸತಿಗೆ ನಡೆಯುವ ಆಚರಣೆಗಳು**

ಮಾಸ್ತ್ಯಮ್ಮನಿಗೆ ಇಲ್ಲಿ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಈ ಹಳ್ಳಿಯಲ್ಲಿ ಮುಖ್ಯವಾಗಿ ಮೂರು ಕುಲದವರಿದ್ದಾರೆ. ಲಿಂಗಾಯತರು, ನಾಯಕರು ಮತ್ತು ಗೊಲ್ಲರು. ಮಾಸ್ತಿ ಗೊಲ್ಲರವಳು, ಕರಡಿನೋರ ಗೊಲ್ಲರವಳು, ಇವರ ಕಟ್ಟೆಮನೆ ಮುಂಗುಸುಳ್ಳಿ ಸೂರ್ಯವಂಶದವರು ಊರಿನ ರಕ್ಷಣೆಗೆ ಹೋದವಳು ಮಾಸ್ತಿ ಎನ್ನುವ ಕಾರಣಕ್ಕೆ ಏನೋ ಊರಿನ ಎಲ್ಲಾ ಕುಲದವರೂ ಇವಳನ್ನು ಪೂಜಿಸುತ್ತಾರೆ. ಊರಿನ ಗೌಡರು ಲಿಂಗಾಂಯಿತರಾಗಿದ್ದರಿಂದ ಇವರಿಗೆ ಈ

ಪೂಜೆಯಲ್ಲಿ ಅಗ್ರಸ್ಥಾನ ನೀಡಿದ್ದಾರೆ ನಂತರ ನಾಯಕರ ಪೂಜೆ ಮೊದಲಾದ ಚಟುವಟಿಕೆಯ ಕಾರ್ಯಗಳನ್ನು ನಿರ್ವಹಿಸುವರು, ಗೊಲ್ಲರ ದೇವತೆಯೇ ಇವಳು.

ಯುಗಾದಿಗೆ ಒಂದು ವಾರದ ಮುಂಚೆ ಸೋಮವಾರ ಸಂಜೆಯಿಂದ ಹಿಡಿದು ಬುಧುವಾರದವರೆಗೆ ಮಾಸ್ತ್ಯಮ್ಮನ ಹಬ್ಬ ನಡೆಯುತ್ತದೆ. ಲಿಂಗಾಯಿತರ ಒಂದು ಭಾಗದವರು ಯುಗಾದಿ ಬದಲು ಮಾಸ್ತಿ ಪೂಜೆಯನ್ನು ಆಚರಿಸುತ್ತಾರೆ. ನಾಯಕರೂ, ಗೊಲ್ಲರೂ ಇದರಲ್ಲಿ ಪಾಲುಗೊಳ್ಳುತ್ತಾರೆ. ಸೋಮವಾರ ಸಂಜೆ ನಯಕ ಪೂಜಾರಿಯ ಮನೆಯಿಂದ ಮಾಸ್ತಿಯ ಮೂಲ ಪ್ರತಿಮೆಯನ್ನು ಬಿಳಿಯ ಸೀರೆ ಉಡಿಸಿ ತೆಗೆದುಕೊಂಡು ಬೇವಿಕಟ್ಟೆಗೆ ಹಾಡನ್ನು ಹೇಳುತ್ತಾ ಬರುತ್ತಾರೆ. ಉಡಲಕ್ಕಿ ತಾಳಿಯನ್ನು ಮಾಸ್ತಿಗೆ ಕಟ್ಟಿದ ನಂತರ ಮೊದಲ ಎಡೆ ಲಿಂಗಾಯತರದ್ದು ನಂತರ ಉಳಿದ ಸಮುದಾಯದವರು ಮಾಡುತ್ತಾರೆ.

ಲಿಂಗಾಯಿತರು ಹಣ್ಣುಕಾಯಿ, ಉಪ್ಪಿಲ್ಲದ ಗೋಧಿಯ ಪಾಯಾಸ ಎಡೆ ಕೊಡುತ್ತಾರೆ. ಗೊಲ್ಲರು ಜೋಳದನ್ನ ಮೊಸರನ್ನ ಎಡೆಯಾಗಿ ಹಿಡಿಯುತ್ತಾರೆ. ಪೂಜೆ ಸಂಜೆ ಮುಗಿದಾಗ ಮದುವಣಗಿತ್ತಿಯನ್ನು ಕೊಡಿಸಿದಂತೆ ಆ ದಿನದ ಗೌಡರ ಎಡೆಯನ್ನು ಮ್ಯಾಸನಾಯಕರು ಹಿಡಿದು ಅನ್ನ ಸಂತರ್ಪಣೆ ನಡೆಸುತ್ತಾರೆ.

ಇಲ್ಲಿಯ ಆಚರಣೆಯ ಇನ್ನೊಂದು ವಿಶೇಷವೆಂದರೆ, ಕಥೆಯಲ್ಲಿನ ಬುಡಬುಡಿಕೆಯವನನ್ನು ಮರಯದೇ ಇರುವುದು. ಸೋಮವಾರ ಸಂಜೆ ಲಿಂಗಾಯಿತರ ಗೌಡರ ಮನೆತನದವರಷ್ಟೇ ಉಳಿದವರೆಲ್ಲ ಒಂದು ಕುರಿಯನ್ನು ಬಲಿಗೋಸ್ಕರವಾಗಿ ಕೇಳುತ್ತಾರೆ. ಈ ೧೮ ಮನೆಯವರು ಸೇರಿ ಕುರಿ ಅಮ್ಮನ ಬಂಡಾರ, ಐದು ಬೆಲ್ಲದಚ್ಚು ಒಂದು ನಿಂಬೆ ಕೊಡುತ್ತಾರೆ. ಆ ದಿನ ಒಲೆಯನ್ನು ಊದದೆ ಮಾಂಸವನ್ನು ಬೇಯಿಸಿ ಬೆಲ್ಲ ನಿಂಬೆ ಹಾಕಿ ಮುಚ್ಚಿ ಗೊಲ್ಲರ ಹಟ್ಟಿಯಲ್ಲಿ ನಿಲುವಿನ ಮೇಲೆ ತೂಗು ಹಾಕುತ್ತಾರೆ ಕೊನೆಯ ದಿನ ಸಂಜೆ ಅದನ್ನು ತಂದು ಲಿಂಗಾಯಿತರನ್ನು ದೂರ ಕಳಿಸಿ ಕಟ್ಟೆಯಲ್ಲಿನ ಬುಡು ಬುಡುಕೆಯವನಿಗೆ ಅದನ್ನು ಮುಟ್ಟಿಸಿ ನಂತರ ತಾವು ತಿನ್ನುತ್ತಾರೆ. ಇಂದಿಗೂ ಸಹ ಕಟ್ಟೆಯ ಒಂದು ಗೂಡಿನಲ್ಲಿ ಬುಡುಬುಡಿಕೆಯವನ ಶಿಲ್ಪವಿದೆ.

ಸಂಖ್ಯೆ : ೦೨

ಶಿಲ್ಪ : ವೀರಮಾಸ್ತಿಗಲ್ಲು

ಊರು : ಕಾನಾಮಡುಗು

ಸ್ಥಳ : ಗ್ರಾಮದ ಮಧ್ಯ

ಕಾಲಮಾನ : ಕಲ್ಯಾಣ ಚಲುಕ್ಯರು

ಕಾನಾಮಡುಗು ಗ್ರಾಮದಲ್ಲಿರುವ ದೊಡ್ಡ ಗಾತ್ರದ ಮಹಾಸತಿ ಕಲ್ಲಿನ ಪಕ್ಕದಲ್ಲಿರುವ ಈ ವೀರ ಮಾಸ್ತಿಕಲ್ಲು ಕೆತ್ತನೆಯು ಸುಂದರವಾಗಿದೆ. ಯಾವ ಲೋಪವು ಪ್ರಾಲೊಭನೆಯಿಲ್ಲದೆ ಶಿಲ್ಪ ಸೌಂದರ್ಯದ ಉತ್ಕೃಷ್ಟ ನಾಜೂಕುತನದಿಂದ ಕಾಣಿಸುತ್ತದೆ. ಇದರ ಕೆಳಭಾಗದಲ್ಲಿ ಐದು ಜನ ಸ್ತ್ರೀಯರು, ಎರಡನೇ ಭಾಗದಲ್ಲಿ ಇಬ್ಬರು ಮೊದಲ ಮೇಲಿನ ಪಟ್ಟಿಕೆಯಲ್ಲಿ ಶಿವಲಿಂಗ, ನಂದಿ, ಸೂರ್ಯ, ಚಂದ್ರರನ್ನು ಕೆತ್ತಲಾಗಿದ್ದು, ೩ ಅಡಿ ಎತ್ತರ ೨.೫ ಅಡಿ ಅಗಲ ಹೊಂದಿದೆ. ಮೇಲ್ಭಾಗದಲ್ಲಿ ಸ್ವರ್ಗದ ಕಲ್ಪನೆಯಿದ್ದು, ಹಸುಗಳೊಂದಿಗೆ ನಿಂತಿರುವುದು ನೋಡಿದರೆ ಪಶುಪಾಲನೆ ಮಾಡುವ ಬುಡಕಟ್ಟು ಜನಾಂಗದ ಪ್ರಭಾವಿ ಮಹಿಳೆ ಅಥವಾ ಮಹಾಸತಿ ಎಂಬುದು ಸ್ಪಷ್ಟವಾಗುತ್ತದೆ.

ಸಂಖ್ಯೆ : ೦೩

ಶಲ್ಪ : ವೀರಮಾಸ್ತಿಗಲ್ಲು

ಊರು : ಕಾನಾಮಡುಗು

ಸ್ಥಳ : ಬೇವಿನ ಮರದ ಕಟ್ಟೆಯ ಕೆಳಗೆ

ಕಾಲಮಾನ : ಕಲ್ಯಾಣ ಚಲುಕ್ಯರು

ಕಾನಾಮಡುಗು ಗ್ರಾಮದ ಮಹಾಸತಿಗಲ್ಲು ಇರುವ ಬೇವಿನ ಮರದ ಕಟ್ಟೆಯ ಕೆಳಭಾಗದಲ್ಲಿರುವ ವೀರ ಮಾಸ್ತಿಗಲ್ಲು ಕಾಣುತ್ತವೆ. ಈ ವೀರಮಾಸ್ತಿಯಾಗುವ ಮುನ್ನ ಅವಳು ಬಿಲ್ಲಿಡಿದು ಎದುರಾಳಿಗಳನ್ನು ಸೆಣಸಾಡಿ ಸಾಯಿಸಿದ್ದಾಳೆ. ಅದರ ಮೆಲ್ಭಾಗದಲ್ಲಿ ತುರುಗಳ ಮುಂದೆ ಎದ್ದು ಕಾಣುತ್ತದೆ. ಇದರ ಕುಸರಿ ಕೆಲಸ ಸಂಪೂರ್ಣವಾಗಿಲ್ಲ ಬಳಪದ ಕಲ್ಲನ್ನು ಬಳಸಿದ್ದಾರೆ. ತಳಭಾಗದಲ್ಲಿ ಸತ್ತ ಹೆಣಗಳ ರಾಶಿಯಂತಿದ್ದು ಇಲ್ಲಿರುವ ತುರುಗಳನ್ನು ದೂರದಿಂದ ನೋಡಿದರೆ ಕುರಿಗಳಂತೆ ಕಾಣುತ್ತವೆ. ಈ ವೀರ ಮಾಸ್ತಿಗಲ್ಲು ಪ್ರಮುಖವಾಗಿದೆ.

ಸಂಖ್ಯೆ : ೦೪

ಶಿಲ್ಪ : ವೀರಮಾಸ್ತಿಗಲ್ಲು

ಊರು : ಪೂಜಾರಹಳ್ಳಿ

ಸ್ಥಳ : ಕುರಿಬೋರಯ್ಯನ ಮಡುವು ಹತ್ತಿರ

ಕಾಲಮಾನ : ವಿಜಯನಗರ ಅರಸರು

ಈ ವೀರಮಾಸ್ತಿಗಲ್ಲು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಕಾನಾಹೊಸಹಳ್ಳಿ ಹೋಬಳಿಗೆ ಸೇರಿದ ಕುಗ್ರಾಮ ಜನ್ನಿಗೆಹಳ್ಳದ ಉಪ್ಪರಹಳ್ಳದ ಕುರಿಬೋರಯ್ಯನ ಮಡುವು ಹತ್ತಿರವಿದೆ. ಸ್ಥಳೀಯ ಕಚ್ಚಾಕಲ್ಲಿನಿಂದ ವೀರಮಾಸ್ತಿಗಲ್ಲನ್ನು ಕೆತ್ತಲಾಗಿದೆ. ಊರಿನ ಮಧ್ಯ ಇದ್ದು

ಏಕಶಿಲಾ ಕಲ್ಲಿನಲ್ಲಿ ಮಹಾಸತಿ ನಿಂತಿದ್ದಾಳೆ ವೀರಯೋಧ ಅಶ್ವಾರೋಹಿಯಾಗಿದ್ದು, ಯುದ್ಧದಲ್ಲಿ ಮಡಿದುದರಿಂದ ತಾನೂ ಸಹ ಹಿಂಬಾಲಿಸಿ ಮಡಿದಿರಬಹುದೆಂಬ ಕೌತುಕಮಯವಾದ ಕಥೆಗಳು ಬೆಳಕು ಚೆಲ್ಲುತ್ತವೆ. ಸ್ಥಳೀಯರು ಇದನ್ನು ಈರಗಾರರ ಗುಡಿ ಎನ್ನುತ್ತಾರೆ. ಇದರಲ್ಲಿ ವೀರವನಿತೆಯೊಬ್ಬಳು ತೃತಿಯಳಾಗಿ ಮುಕ್ತಿ ಪಡೆಯಲು ಕೈಮುಗಿದು ನಿಂತಿದ್ದಾಳೆ. ಯಾವ ಅರಸನಿಗೆ ಮಡದಿಗೆ ಸೇರಿದ್ದೆಂದು ತಿಳಿದು ಬಂದಿಲ್ಲ, ಆದರೆ ಪಕ್ಕದಲ್ಲಿದ್ದ ಮಧ್ಯಕಾಲೀನ ನಗರ ಚನ್ನಪಟ್ಟಣ ವಿಜಯನಗರದ ಅಧೀನದಲ್ಲಿದ್ದು ಪಾಳೆಯಗಾರರ ಕಾಲಕ್ಕೆ ಪ್ರಾಬಲ್ಯ ಹೊಂದಿತ್ತು.

ಸಂಖ್ಯೆ: ೦೫

ಶಿಲ್ಪ: ವೀರಮಾಸ್ತಿಗಲ್ಲು

ಊರು: ತಾಯಕನಹಳ್ಳಿ

ಸ್ಥಳ: ತಿಪ್ಪೇಸ್ವಾಮಿಯವರ ಹೊಲದಲ್ಲಿ

ಕಾಲಮಾನ: ೧೩ನೇ ಶತಮಾನ

ಕಾನಾಹೊಸಹಳ್ಳಿ ಹೋಬಳಿ ವ್ಯಾಪ್ತಿಯಲ್ಲಿರುವ ತಾಯಕನಹಳ್ಳಿ ಗ್ರಾಮದ ಕುರುಬರ ತಿಪ್ಪೇಸ್ವಾಮಿಯವರ ಹೊಲದಲ್ಲಿ ಈ ವೀರಮಾಸ್ತಿಗಲ್ಲು ಇದೆ. ಇದು ಸುಮಾರು ೬ ಅಡಿ ಎತ್ತರ ೨ ಅಡಿ ಅಗಲವಿದೆ. ಕಣಶಿಲೆಯಲ್ಲಿ ಐದು ಹಂತಗಳ ಪಟ್ಟಿಕೆಗಳಿವೆ. ಕೆಳಭಾಗದ ಮೊದಲ ಪಟ್ಟಿಕೆಯಲ್ಲಿ ಅಲಂಕೃತಗೊಂಡ ಕುದುರೆ ಚಿತ್ರಣವಿದೆ. ಇದು ವೀರನ ಕುದುರೆಯ ಮೇಲೆ ಯುದ್ಧಕ್ಕೆ ಹೋರಾಡಿರುವುದು ಕಂಡುಬರುತ್ತದೆ. ಕುದುರೆಯ ಮುಗುದಾರ ಹಣೆಪಟ್ಟಿ ಲಗಾಮು, ಕುದುರೆಯ ಬೆನ್ನಿನ ಭಾಗದಲ್ಲಿನ ಹೊದಿಕೆ ವಸ್ತ್ರ ವಿಶೇಷವಾಗಿದೆ ಹಾಗೂ ಕುದುರೆ ಅಲಂಕರಣ ಸಾಮಾಗ್ರಿಗಳನ್ನು ಕಾಣಬಹುದು. ಎರಡನೇ ಪಟ್ಟಿಕೆಯಲ್ಲಿ ಸತಿಪತಿಗಳ ಇಬ್ಬರ ಇರುವುದನ್ನು ಕಾಣಬಹುದು ಇಲ್ಲಿ ವೀರನು ಎಡಗೈಯಲ್ಲಿ ಬಿಲ್ಲು ಬಲಗೈಯಲ್ಲಿ ಬಾಕು ಹಿಡಿದು ಯುದ್ಧ ಸನ್ನದ್ದನಾಗಿದ್ದಾನೆ.

ವೀರನ ಶಿರದಲ್ಲಿ ಶಿರಮುಡಿ ಕಟ್ಟಿದ್ದು ಸ್ವಲ್ಪ ಬಲಕ್ಕೆ ಬಾಗಿದೆ. ಕಿವಿಯಲ್ಲಿ ಕುಂಡಲಗಳಿವೆ. ಕೊರಳಲ್ಲಿ ಕಂಟಹಾರ ಇದ್ದು ತೋಳಬಂದಿ ಹಾಗೂ ಭುಜಬಂದಿ ಕಾಣುತ್ತವೆ. ಸೊಂಟದಲ್ಲಿ ಸೊಂಟಪಟ್ಟಿ ಧರಿಸಿದ್ದು ವೀರಗಚ್ಚೆಯ ರವಿಕೆಯನ್ನು ಕೆತ್ತಲಾಗಿದೆ. ಈ ವೀರನು ಕಾಲುಕಡಗ ಧರಿಸಿದ್ದು ಪಾದಗಳ ಎಡಕ್ಕೆ ತಿರುಗಿದ ಹಾಗೆ ಇವೆ. ಇಲ್ಲಿ ಸತಿಯು ಎಡಗೈಯಲ್ಲಿ ಕನ್ನಡಿ ಹಿಡಿದು ಬಲಗೈಯನ್ನು ಮೇಲಕ್ಕೆ ಎತ್ತಿ ಹರಿಸುತ್ತಿರುವಂತೆ ಕೆತ್ತಲಾಗಿದೆ. ಸತಿಯು ವೀರಮುಡಿ ಕಟ್ಟಿದ್ದು ಬಲಕ್ಕೆ ಸ್ವಲ್ಪ ಬಾಗಿದಂತಿದೆ. ಕಿವಿಯಲ್ಲಿ ಕುಂಡಲಗಳಿವೆ. ಕೊರಳಲ್ಲಿ ಕಂಟಹಾರ, ತೊಳಬಂದಿ,

ಕೈಬಳೆ, ಹಾಗೂ ಆಕೆಯು ಸೀರೆಯನ್ನು ಧರಿಸಿ ದಂತೆ ಕೆತ್ತಲಾಗಿದೆ. ಸೀರೆಯ ನೆರಿಗೆಗಳು ನೀಳವಾಗಿ ಸುಂದರವಾಗಿ ಕಾಣುವಂತೆ ಕೆತ್ತಲಾಗಿದೆ.

ಮೂರನೇ ಪಟ್ಟಿಕೆಯಲ್ಲಿ ಅಪರೂಪದ ದೃಶ್ಯವನ್ನು ಶಿಲ್ಪದಲ್ಲಿ ಕಾಣಬಹುದು ಸತಿಪತಿಗಳ ಇಬ್ಬರು ನಿಂತಿರುವ ಭಂಗಿಯಲ್ಲಿವೆ. ಸತಿಯು ಎಡಗೈಯಲ್ಲಿ ಚಿಕ್ಕ ಮಗುವಿನ ಕೈಯನ್ನು ಹಿಡಿದಿರುವ ದೃಶ್ಯವಿದೆ. ಪ್ರಾಯಶ ಈ ಮಗು ಈ ದಂಪತಿಗಳ ಮಗನಾಗಿರಬಹುದು. ಸತಿಯು ತನ್ನ ಮಗುವಿನೊಂದಿಗೆ ಅಗ್ನಿ ಪ್ರವೇಶ ಮಾಡಿರಬಹುದು. ಇದೇ ತರಹ ಲಕ್ಷಣ ಇರುವ ಶಿಲ್ಪವೊಂದು ಆರ್. ಶೇಷಾಶಾಸ್ತ್ರಿಯವರು ಗುರುತಿಸಿ ಕರ್ನಾಟಕದಲ್ಲಿ ಮೊದಲ ಅಪರೂಪದ ಶಿಲ್ಪವೆಂದು ಉಲ್ಲೇಖಿಸಿರುತ್ತಾರೆ ಅದರ ಪ್ರಕಾರ ನನ್ನ ಅಧ್ಯಯನದ ಪ್ರದೇಶದಲ್ಲಿ ಆ ರೀತಿಯ ಲಕ್ಷಣದಿಂದ ಶಿಲ್ಪ ಕಂಡುಬಂದಿರುವುದು ವಿಶೇಷವಾಗಿದೆ. ಸತಿ ಪತಿಗಳ ಇಬ್ಬರ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ.

ನಾಲ್ಕನೇ ಪಟ್ಟಕೆಯಲ್ಲಿ ಸತಿಪತಿಗಳ ಇಬ್ಬರು ಸ್ವರ್ಗಕ್ಕೆ ಹೋಗುವ ದೃಶ್ಯವನ್ನು ಕಾಣಬಹುದು. ಇಲ್ಲಿ ವೀರನನ್ನು ಎಡಭಾಗದಲ್ಲಿ ಸತಿಯನ್ನು ಬಲಭಾಗದಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ. ಸತಿಪತಿ ಇಬ್ಬರು ಕಿರೀಟ, ಕಿವಿಯಲ್ಲಿನ ಕುಂಡಲಗಳು ತೋಳಬಂದಿ, ಭುಜಬಂದಿ, ಧರಿಸಿದ್ದಾರೆ ಪತಿಯು ವೀರಗಚ್ಚೆ ಸತಿಯು ಸೀರೆಯನ್ನು ಧರಿಸಿದಂತೆ ಕೆತ್ತಲಾಗಿದೆ.
ಐದನೇ ಪಟ್ಟಿಕೆಯಲ್ಲಿ ಅಂದರೆ ಕೊನೆಯ ಹಂತದಲ್ಲಿ ಶಿವಲಿಂಗ, ನಂದಿ, ಎಡಭಾಗದಲ್ಲಿವೆ. ಬಲಭಾಗದಲ್ಲಿ ಸೂರ್ಯ, ಚಂದ್ರವನ್ನು ಕೆತ್ತಲಾಗಿದೆ.

ಸಂಖ್ಯೆ : ೦೬

ಶಿಲ್ಪ : ವೀರಗಲ್ಲು

ಊರು : ಕಾನಾಹೊಸಹಳ್ಳಿ

ಸ್ಥಳ : ಕಲ್ಲೇಶ್ವರ ದೇವಾಲಯದಲ್ಲಿ

ಕಾಲಮಾನ : ಕಲ್ಯಾಣ ಚಲುಕ್ಯರು

ಕಾನಾಹೊಸಹಳ್ಳಿಯ ಕಲ್ಲೇಶ್ವರ ದೇವಾಲಯದ ಒಳಭಾಗದಲ್ಲಿ ಒಂದು ವೀರಗಲ್ಲು ಇದ್ದು ಇದರ ಅಳತೆ ಎತ್ತರ ೭೪ ಸೆಂ.ಮೀ ಇದರ ಅಗಲ ೩೮ ಸೆಂ.ಮೀ ಇದ್ದು ಮೂರು ಹಂತಗಳನ್ನು ಒಳಗೊಂಡಿದೆ. ಮೊದಲನೆಯ ಪಟ್ಟಿಕೆಯಲ್ಲಿ ಯುದ್ಧದಲ್ಲಿ ವೀರನು ಹೋರಾಡುತ್ತಿರುವ ಚಿತ್ರಣ ಕಂಡುಬಂದಿದ್ದು, ಎರಡನೇ ಹಂತದಲ್ಲಿ ವೀರನು ಧ್ಯಾನಮಗ್ನನಾಗಿ ಕುಳಿತಿರುವುದು ಕಂಡುಬರುತ್ತದೆ. ಮೂರನೇ ಹಂತದಲ್ಲಿ ಸೂರ್ಯ, ಚಂದ್ರ ಇದ್ದು ನಂದಿ ಮತ್ತು ಲಿಂಗವನ್ನು

ಪೂಜಿಸುತ್ತಿರುವಂತೆ ಅಸ್ಪಷ್ಟವಾಗಿ ಕಾಣಿಸುತ್ತವೆ. ಸಾಧ್ಯದ ಸ್ಥಿತಿಯಲ್ಲಿ ವೀರಗಲ್ಲು ಪೂರ್ವಾಭಿಮುಖವಾಗಿದೆ.

ಸಂಖ್ಯೆ : ೦೭

ಶಿಲ್ಪ : ವೀರಗಲ್ಲು

ಊರು : ಹುಲಿಕೆರೆ

ಸ್ಥಳ : ಕಲ್ಲೇಶ್ವರ ದೇವಾಲಯದ ಒಳಭಾಗದಲ್ಲಿದೆ

ಕಾಲಮಾನ :ಕಲ್ಯಾಣ ಚಲುಕ್ಯರು

ಈ ವೀರಗಲ್ಲು ಹುಲಿಕೆರೆ ಗ್ರಾಮದ ಕಲ್ಲೇಶ್ವರ ದೇವಾಲಯದ ಪ್ರವೇಶದ್ವಾರದ ಹಿಂಭಾಗಿಲಿನ ಕಟ್ಟೆಯ ಮೇಲೆ ನಿಲ್ಲಿಸಿದ್ದಾರೆ. ಈ ವೀರಗಲ್ಲು ಸುಮಾರು ನಾಲ್ಕು ಅಡಿ ಎತ್ತರವಾಗಿದ್ದು ಕಪ್ಪುಶಿಲೆಯಿಂದ ಕೆತ್ತಲಾಗಿದೆ. ಮೊದಲ ಪಟ್ಟಿಕೆಯಲ್ಲಿ ಯುದ್ಧ ಸನ್ನಿವೇಶದ ಚಿತ್ರಣವನ್ನು ಕೆತ್ತಲಾಗಿದ್ದು ಇದರಲ್ಲಿ ವೀರರ ಇಬ್ಬರು ಶತ್ರುಗಳೊಂದಿಗೆ ಹೋರಾಡುತ್ತಿರುವಂತೆ ಖಂಡರಿಸಲಾಗಿದೆ. ಇವರಿಗೆ ಅಭಿಮುಖವಾಗಿರುವಂತೆ ಶತ್ರುಗಳು ಆಯುಧಗಳನ್ನು ಹಿಡಿದು ನಿಂತಿರುವಂತೆ ಕೆತ್ತಲಾಗಿದೆ. ವೀರರ ಕೆಳಭಾಗದಲ್ಲಿ ವೈರಿಗಳ ಹತರಾಗಿ ಬಿದ್ದಿರುವಂತೆ ಖಂಡರಿಸಿದ್ದಾರೆ. ಎರಡನೇಯ ಪಟ್ಟಿಕೆಯಲ್ಲಿ ವೀರರು ಇಬ್ಬರನ್ನು ನಾಲ್ಕು ಜನ ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವಂತೆ ಸ್ಥಾನಿಕ ಭಂಗಿಯಲ್ಲಿ ಕೆತ್ತಿದ್ದಾರೆ. ಮೂರನೇ ಪಟ್ಟಿಕೆಯಲ್ಲಿ ವೀರರ ಇಬ್ಬರು ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದಾರೆ ಇವರ ನಡುವೆ ನಂದಿ ಇದ್ದು ಇದರ ಮೇಲ್ಭಾಗದಲ್ಲಿ ಶಿವಲಿಂಗ ಇದೆ.

ಸಂಖ್ಯೆ : ೦೮

ಶಿಲ್ಪ : ವೀರಗಲ್ಲು

ಊರು : ತಿಪ್ಪೇಹಳ್ಳಿ

ಸ್ಥಳ : ಊರಿನ ಮಟ್ಟಿಯ ಮೇಲೆ

ಕಾಲಮಾನ : ವಿಜನಗರೋತ್ತರ

ಕಾನಾಹೊಸಹಳ್ಳಿ ಹೋಬಳಿ ಪರಿಸರದ ವ್ಯಾಪ್ತಿಯಲ್ಲಿ ಬರುವ ತಿಪ್ಪೇಹಳ್ಳಿ ಗ್ರಾಮದ ಮಟ್ಟಿಯ ಮೇಲೆ ಈ ವೀರಗಲ್ಲು ಇದೆ. ಈ ಸ್ಥಳವನ್ನು ಸ್ಥಳಿಯರು ಹೇಳುವಾಗೆ ಹೊನ್ನಿನ ತಿಪ್ಪೇಹಳ್ಳಿ ಎಂದು ಕರೆಯುತ್ತಾರೆ. ಇಲ್ಲಿರುವ ಈ ವೀರಗಲ್ಲು ಚೌಕಾಕಾರದ ಒಂದೇ ಪಟ್ಟಿಕೆಯಿಂದ ಕೂಡಿದ್ದು, ವೀರನನ್ನು ಉಗ್ರರೂಪದಲ್ಲಿ ಕೆತ್ತಲಾಗಿದೆ. ವೀರನು ವೀರಮುಡಿಯನ್ನು ಕಟ್ಟಿದ್ದು ಅದು ಬಲಭಾಗಕ್ಕೆ ವಾಲಿದೆ. ಇದನ್ನು ಕರ್ಣಗಳ ವಿಶಾಲವಾಗಿದ್ದು ಭೂಜಭಾಗದ ವರೆಗೂ ವಿಸ್ತರಿಸಿವೆ.

ಕೊರಳಲ್ಲಿ ಕೊರಳಪಟ್ಟಿ, ಕೊರಳಹಾರಗಳಿವೆ. ಈ ವೀರನು ಎಡಗೈಯಲ್ಲಿ ಬಾಕು ಎಂದು ಆಯುಧ ಹಿಡಿದು ಬಲಗೈಯಲ್ಲಿ ಕತ್ತಿಯನ್ನು ಹಿಡಿದುಕೊಂಡಿದ್ದಾನೆ. ಹಾಗೂ ತೋಳಬಂದಿ ಮತ್ತು ಕೈಕಡಗಗಳನ್ನು ಧರಿಸಿದ್ದಾರೆ. ಸೊಂಟದಲ್ಲಿ ವೀರಗಚ್ಚೆ ಧರಿಸಿದ್ದು ಅದು ಎರಡು ಕಾಲುಗಳ ನಡುವೆ ಸ್ವಲ್ಪ ಇಳಿಬಿದ್ದಿದೆ. ಎರಡು ಪಾದಗಳ ಎಡಭಾಗಕ್ಕೆ ವಾಲಿದ್ದು ಕಾಲುಗಡಗವನ್ನು ಧರಿಸಿದ್ದಾನೆ.

ಸಂಖ್ಯೆ : ೦೯

ಶಿಲ್ಪ : ವೀರಗಲ್ಲು

ಊರು : ಕುಮತಿ

ಸ್ಥಳ : ಸಿದ್ದಲಿಂಗೇಶ್ವರ ಹೊರಮಠದ ಮುಂಭಾಗದ ಕಟ್ಟೆಯ ಮೇಲೆ

ಕಾಲಮಾನ : ವಿಜಯಗರೋತ್ತರ

ಕುಮತಿ ಗ್ರಾಮದಿಂದ ಒಂದೂವರೆ ಕಿ.ಮೀ ಸಿದ್ದೇಶ್ವರ ಹೊರಮಠ ಮುಂದಿನ ಕಟ್ಟೆಯ ಮೇಲಿನ ಈ ವೀರಗಲ್ಲು ಚಿಕ್ಕದಾಗಿದ್ದು ಯುದ್ಧ ನಡೆಯುವ ಪ್ರಸಂಗವನ್ನು ಸೂಚಿಸುತ್ತದೆ. ವೀರನು ಕುದುರೆ ಮೇಲೆ ಕುಳಿತುಕೊಂಡು ಯುದ್ಧ ಮಾಡುವುದನ್ನು ಕಾಣುತ್ತೇವೆ. ಈತನು ಎಡಗೈಯಲ್ಲಿ ಕುದುರೆಯ ಬಾಯೊಳಗೆ ಕಬ್ಬಿಣದ ಕಾವಲುಗೋಲು ಆದ ಲಗಾಮನ್ನು ಹಿಡಿದುಕೊಂಡು ಬಲಗೈಯನ್ನು ಮೇಲಕ್ಕೆ ಎತ್ತಿ ಖಡ್ಗ ಹಿಡಿದುಕೊಂಡಿರುವುದನ್ನು ಕಾಣುತ್ತೆವೆ. ಕುದುರೆಯ ಮೇಲೆ ವೀರನು ಕುಳಿತುಕೊಳ್ಳಲು ಅನುಕೂಲವಾಗುವಂತೆ ಜೀನನ್ನು ಹಾಕಲಾಗಿದ್ದು ಅದು ಅಲಂಕಾರ ಯುತವಾಗಿದೆ. ವೀರನು ವೀರಮುಡಿ ಕಟ್ಟಿದ್ದು ಈತನ ಎಡಬಲದಲ್ಲಿ ಇತರ ಸಣ್ಣ ಚಿತ್ರಗಳನ್ನು ಖಂಡರಿಸಲಾಗಿದೆ. ಅವುಗಳ ನಾಶಿಸಿರುವುದರಿಂದ ಸರಿಯಾಗಿ ಗುರುತಿಸಲು ಆಗುತ್ತಿಲ್ಲ ಶಿಲೆ ಮತ್ತು ಕೆತ್ತನೆಯ ಲಕ್ಷಣಗಳಿಂದ ವಿಜಯನಗರೋತ್ತರ ಕಾಲದ್ದಾಗಿದೆ.

**ತುರುಗೋಳ್ ವೀರಗಲ್ಲು**

ಪ್ರಾಚಿನ ಕಾಲದಲ್ಲಿ ಗೋವುಗಳು ಸಂಪತ್ತಿನ ಅಂದರೆ ಶ್ರೀಮಂತಿಕೆಯ ವಸ್ತುವಾಗಿದ್ದವು ಸಂಪತ್ತಿನ ರೂಪದಲ್ಲಿ ಗೋವುಗಳನ್ನು ಸಾಕುತ್ತಿದ್ದರು, ಇಂತಹ ಗೋವುಗಳನ್ನು ಕಳ್ಳರು ಕದ್ದುಕೊಂಡು ಹೋಗುವ ಸಂದರ್ಭದಲ್ಲಿ ಊರಿನ ವೀರರು ಅವರೊಡನೆ ಹೋರಾಡಿ ಅವುಗಳನ್ನು ಬಿಡಿಸಿ ಮತ್ತು ಹೋರಾಟದಲ್ಲಿ ಸಾವನ್ನಪಿದವರ ನೆನಪಿಗಾಗಿ ಈ ವೀರಗಲ್ಲುಗಳನ್ನು ಹಾಕಿಸುತ್ತಿದ್ದರು. ಇವುಗಳಿಗೆ ಗೋಗ್ರಹಣ ವೀರಗಲ್ಲು ಎಂದು ಸಹ ಕರೆಯುತ್ತಾರೆ.

ತುರುಗೋಳ ಎಂಬ ಪದವು ತುರು ಮತ್ತು ಕೊಳ್ ಎಂಬ ಎರಡು ಪದಗಳಿಂದ ಬಂದಿದೆ. ಇದರರ್ಥ ಗೋವುಗಳ ಅಪಹರಣವೆಂದು ಕನ್ನಡದಲ್ಲಿ ತುರುಗೋಳ್ ಶಾಸನಗಳ

ಸ್ವರೂಪ, ವಿಷಯ, ಮತ್ತು ಮಹತ್ವ ಕುರಿತು ಸಾಕಷ್ಟು ಸಂಶೋಧನಗಳು ನಡೆದಿವೆ. ತುರುಗೋಳ್ ಶಾಸನ ಶಿಲ್ಪಗಳು ಕರ್ನಾಟಕದ ವೀರಗಲ್ಲುಗಳಲ್ಲಿ ಒಂದು ಪ್ರತ್ಯೇಕ ವಿಧವೆನ್ನೆ ಸೃಷ್ಟಿಸಿವೆ. ಈ ಸ್ಮಾರಕಗಳನ್ನು ತನ್ನ ಗ್ರಾಮದ ಗೋವುಗಳ ರಕ್ಷಣೆಗೆ ಹೋರಾಡಿ ಪ್ರಾಣತ್ಯಾಗ ಮಾಡಿದ ವೀರನ ನೆನಪಿಗಾಗಿ ನಿರ್ಮಿಸಲಾಗಿದೆ.

ಇವುಗಳಲ್ಲಿ ವೀರನ ಶೌರ್ಯವನ್ನು ಹೊಗಳಿರುವ ಮತ್ತು ವೀರನು ಮಣಿಸುವ ಮೊದಲು ಗೋವುಗಳನ್ನು ರಕ್ಷಿಸಿ ಗ್ರಾಮಕ್ಕೆ ಹಿಂದಿರುಗಿಸಿದನೆಂಬ ಉಲ್ಲೇಖವಿರುತ್ತದೆ. ಶಿಲ್ಪದ ಹೋರಾಟ ದೃಶ್ಯದಲ್ಲಿ ವೀರನು ಶತ್ರುಗಳೊಂದಿಗೆ ಹೋರಾಡುತ್ತಿರುವ ಹಾಗೂ ಆತನ ಹಿಂಭಾಗದಲ್ಲಿ ಗೋವುಗಳ ಚಿತ್ರಣವಿದ್ದು ಉಳಿದಂತೆ ಇತರ ವೀರಗಲ್ಲುಗಳಲ್ಲಿರುವ ದೃಶ್ಯಗಳು ಕಂಡುಬರುತ್ತವೆ. ನನ್ನ ಅಧ್ಯಯನ ಪ್ರದೇಶದಲ್ಲಿನ ವ್ಯಾಪ್ತಿಯಲ್ಲಿ ಮೂರು ತುರುಗೋಳ್ ವೀರಗಲ್ಲುಗಳು ಕಂಡುಬಂದಿವೆ. ಅವುಗಳಲ್ಲಿನ ವೈಶಿಷ್ಟ್ಯವಾದ ವಿವರಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಸಂಖ್ಯೆ : ೧೦

ಶಿಲ್ಪ : ತುರುಗೋಳ್ ವೀರಗಲ್ಲು

ಊರು : ಹುಲಿಕೆರೆ

ಸ್ಥಳ : ಕಲ್ಲೇಶ್ವರ ದೇವಾಲಯದ ಹೊರಭಾಗದಲ್ಲಿ

ಕಾಲಮಾನ : ಕಲ್ಯಾಣ ಚಲುಕ್ಯರು

ಕಾನಾಹೊಸಹಳ್ಳಿಯಿಂದ ಸುಮಾರು ನಾಲ್ಕು ಕಿ.ಮೀ ದೂರದಲ್ಲಿರುವ ಹುಲಿಕೆರೆ ಗ್ರಾಮದ ಕಲ್ಲೇಶ್ವರ ದೇವಾಲಯದ ಹೊರಭಾಗದಲ್ಲಿರುವ ಈ ತುರುಗೋಳ್ ವೀರಗಲ್ಲು ಕಾಣಬಹುದು. ೪ ಅಡಿ ಎತ್ತರ ೧.೫ ಅಡಿ ಅಗಲ ಹೊಂದಿದ್ದು ನೀಲಿ ಮಿಶ್ರಿತ ಕಪ್ಪುಶಿಲೆಯಿಂದ ಕೆತ್ತಲಾಗಿದೆ. ಈ ವೀರಗಲ್ಲು ಮೂರು ಪಟ್ಟಿಕೆಗಳಿಂದ ಕೂಡಿದೆ. ಮೊದಲ ಪಟ್ಟಿಕೆಯಲ್ಲಿ ವೀರರು ಪರಸ್ಪರ ವೈರಿಪಡೆಗಳೊಂದಿಗೆ ಹೋರಾಡುತ್ತಿರುವ ದೃಶ್ಯವಿದ್ದು, ಅದರಲ್ಲಿನ ಮಧ್ಯದಲ್ಲಿರುವ ವೀರನೊಬ್ಬನು ತನ್ನ ಬಲಗಾಲಿನ ಮೇಲೆ ತನ್ನ ವೈರಿಯ ತಲೆಯ ಇಟ್ಟುಕೊಂಡು ಎಡಗೈಯಲ್ಲಿ ಜುಟ್ಟನ್ನು ಹಿಡಿದು ಬಗ್ಗಿಸಿ ಬಲಗೈಯಿಂದ ತನ್ನ ಕೈಯಲ್ಲಿರುವ ಕತ್ತಿಯಿಂದ ತಲೆಯನ್ನು ಕತ್ತರಿಸುವಂತೆ ಚಿತ್ರಿಸಲಾಗಿದ್ದು ಎಡಭಾಗದಲ್ಲಿ ಮತ್ತೊಬ್ಬ ವೀರನು ಮೊಣಕಾಲು ಊರಿ ಕುಳಿತ ಕಾಲುಗಳ ಮಧ್ಯದಿಂದ ವೈರಿಯನ್ನು ಹಿಡಿದು ತಲೆಯನ್ನು ಕತ್ತರಿಸುವಂತೆ ಕೆತ್ತಲಾಗಿದೆ. ಬಲಭಾಗದ ಇನ್ನೊಬ್ಬ ವೀರನು ವೈರಿಯನ್ನು ಭರ್ಚಿಯಿಂದ ತಿವಿಯುತ್ತಿರುವುದು ಕಾಣುತ್ತೇವೆ. ಒಟ್ಟಾರೆ ಈ ಪಟ್ಟಿಕೆಯಲ್ಲಿ ಮೂವರು ವೀರರು ಮೂವರು ವೈರಿಗಳನ್ನು ಕಾಣುತ್ತೇವೆ. ಎಡಭಾಗದಲ್ಲಿ ಎರಡು ಗೋವುಗಳು ತಮ್ಮ ಎರಡು ಮುಂಗಾಲುಗಳನ್ನು ಮುಂದಕ್ಕೆ ಹಿಟ್ಟಿರುವಂತೆ ಕಂಡುಬರುತ್ತದೆ. ಇದರ

ಕೆಳಭಾಗದಲ್ಲಿ ನಾಯಿ ಶಿಲ್ಪ ಇರುವುದು ವಿಶೇಷವಾಗಿದೆ. ಅಂದರೆ ಈ ತುರುಗೋಳ್ ವೀರಗಲ್ಲನ್ನು ಗಮನಿಸಿದಾಗ ಬಹುಶ ದನಗಳನ್ನು ಕಾಯುತ್ತಿರುವಂತಹ ಸಂದರ್ಭದಲ್ಲಿ ವೈರಿಗಳು ಬಂದಂತಹ ಸಂದರ್ಭದಲ್ಲಿ ಈ ಘಟನೆ ನಡೆದಿರಬಹುದು.

ಇನ್ನು ಎರಡನೆಯ ಪಟ್ಟಿಕೆಯಲ್ಲಿ ಮೂವರು ಅಪ್ಸರೆಯರು ಮೂವರು ವೀರರನ್ನು ಭುಜದ ಮೇಲೆ ಭುಜಕ್ಕೆ ಕೈಹಾಕಿಕೊಂಡು ಸ್ವರ್ಗಕ್ಕೆ ಕೊಂಡೊಯ್ಯುವಂತೆ ಚಿತ್ರಿಸಲಾಗಿದೆ.

ಮೂರನೇ ಪಟ್ಟಿಕೆಯಲ್ಲಿ ಶಿವಲಿಂಗವಿದ್ದು ಯತಿ ಅದಕ್ಕೆ ಪೂಜಿಸುತ್ತಿದ್ದಾನೆ. ಮೂವರು ವೀರರು ಕೈಮುಗಿದು ಪದ್ಮಾಸನದಲ್ಲಿ ಕುಳಿತು ಕೊಂಡಿದ್ದಾರೆ. ಹಾಗೂ ವೀರಮುಡಿಯನ್ನು ಕಟ್ಟಿಕೊಂಡಿರುವುದು ಕಾಣುತ್ತೇವೆ. ಇವರ ಮೇಲಿನ ಭಾಗದಲ್ಲಿ ಸೂರ್ಯ, ಚಂದ್ರ ಇರುವುದನ್ನು ಕಾಣಬಹುದು.

ಸಂಖ್ಯೆ : ೧೧

ಶಿಲ್ಪ : ತುರುಗೋಳ್ ವೀರಗಲ್ಲು

ಊರು : ಕುಮತಿ

ಸ್ಥಳ : ಸಿದ್ದಲಿಂಗೇಶ್ವರ ಹೊರಮಠದ ಮುಂಭಾಗದಲ್ಲಿ

ಕಾಲಮಾನ : ಕಲ್ಯಾಣ ಚಲುಕ್ಯರು

ಕಾನಾಹೊಸಹಳ್ಳಿ ಹೋಬಳಿಯಿಂದ ೨೨ ಕಿ.ಮೀ ದೂರದಲ್ಲಿರುವ ಕುಮತಿ ಗ್ರಾಮವಿದ್ದು ಈ ಗ್ರಾಮದಿಂದ ಸುಮಾರು ಒಂದುವರೆ ಕಿ.ಮೀ ದೂರದ ಸಿದ್ಧಲಿಂಗೇಶ್ವರ ಹೊರಮಠ ಈ ದೇವಾಲಯದ ಮುಂಭಾಗದಲ್ಲಿ ಎರಡು ತುರುಗೋಳ್ ವೀರಗಲ್ಲುಗಳಿವೆ. ಮೂರುವರೆ ಅಡಿ ಎತ್ತರ ಎರಡು ಅಡಿ ಅಗಲ ಇದ್ದು ಇವುಗಳ ಶಿಲೆ ಮತ್ತು ಕೆತ್ತನೆ ದೃಷ್ಟಿಯಿಂದ ಕಲ್ಯಾಣ ಚಾಲುಕ್ಯರ ಕಾಲದ ತುರುಗೋಳ್ ವೀರಗಲ್ಲುಗಳು ಆಗಿರಬಹುದೆಂದು ತರ್ಕಿಸಿದ್ದಾನೆ.

ದೇವಾಲಯಕ್ಕೆ ಅಭಿಮುಖವಾಗಿರುವ ಎಡಭಾಗದ ತುರುಗೋಳ್ ವೀರಗಲ್ಲು ಮೂರು ಪಟ್ಟಿಕೆಗಳಿಂದ ಕೂಡಿದೆ, ವೀರರು ಇರ್ವರು ಬಿಲ್ಲು ಬಾಣಗಳಿಂದ ವೈರಿಯೊಂದಿಗೆ ಹೋರಾಡುತ್ತಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ವೈರಿಯನ್ನು ಕುದುರೆಯ ಮೇಲೆ ಖಂಡರಿಸುವುದು ವಿಶೇಷವಾಗಿದೆ. ಇವರ ಕೆಳಭಾಗದಲ್ಲಿ ವೈರಿಗಳು ಮತ್ತು ಹಸುಗಳ ಶಿಲ್ಪಗಳನ್ನು ಖಂಡರಿಸಲಾಗಿದೆ. ಇದರ ಮೇಲಿನ ಪಟ್ಟಿಕೆಯು ಹಸುಗಳಿಂದ ಅಲಂಕರಿಸಲಾಗಿದೆ. ಎರಡನೆಯ ಪಟ್ಟಿಕೆಯಲ್ಲಿ ವೀರನನ್ನು ಪಲ್ಲಕ್ಕಿಯಲ್ಲಿ ಕುರಿಸಿಕೊಂಡು ಚಾಮರಧಾರೆಯರು ಚಾಮರವನ್ನು ಬೀಸುತ್ತ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೂರನೆಯ ಪಟ್ಟಿಕೆಯಲ್ಲಿ ಶಿವಲಿಂಗವಿದ್ದು ಅದರ ಬಲಭಾಗದಲ್ಲಿ ಯತಿ ಪೂಜಿಸುತ್ತಿರುವಂತೆ ಈತನ ಹಿಂಭಾಗದಲ್ಲಿ ವೀರನು ಕುದುರೆಯ ಮೇಲೆ

ಕೈಮುಗಿದು ಕುಳಿತ್ತಿರುವಂತೆ ಚಿತ್ರಿಸಲಾಗಿದೆ. ಇನ್ನು ಎಡಭಾಗದಲ್ಲಿ ವೀರರ ಇಬ್ಬರು ಕೈಮುಗಿದು ಪ್ರಾರ್ಥಿಸಿರುವಂತೆ ಚಿತ್ರಿಸಲಾಗಿದೆ. ಇದರ ಎಡಬಲದಲ್ಲಿ ಸೂರ್ಯ ಚಂದ್ರ ಇರುವುದು.

ದೇವಾಲಯಕ್ಕೆ ಅಭಿಮುಖವಾಗಿರುವ ಬಲಭಾಗದ ತುರುಗೋಳ್ ವೀರಗಲ್ಲು ಇದು ಸಹ ಮೂರು ಪಟ್ಟಿಕೆಗಳಿಂದ ಕೂಡಿದೆ. ಮೊದಲ ಪಟ್ಟಿಕೆಯು ವಿಶೇಷವಾಗಿ ಕೆತ್ತಲಾಗಿದೆ. ಇದರಲ್ಲಿ ಮೊದಲ ಹಂತದಲ್ಲಿ ವೀರರ ಇಬ್ಬರು ಆಳೆತ್ತರದ ಬಿಲ್ಲುಗಳನ್ನು ಹಿಡಿದು ಎದುರಾಳಿಯೊಂದಿಗೆ ಹೋರಾಡುತ್ತಿರುವ ದೃಶ್ಯ ವೈರಿಯು ಪ್ರತಿರೊಧಿಸುವ ಚಿತ್ರ ಕಾಣುತ್ತವೆ. ಈ ಮೂವರ ಮೇಲು ಭಾಗದಲ್ಲಿ ವೈರಿಗಳು ಹತರಾಗಿ ಬಿದ್ದಿರುವಂತೆ ಚಿತ್ರಿಸಲಾಗಿದೆ. ಪುನಃ ಇವರ ಮೇಲೆ ಭಾಗದಲ್ಲಿ ಇಬ್ಬರು ವೀರರು ಆಳೆತ್ತರದ ಬಿಲ್ಲು ಬಾಣಗಳನ್ನು ಹಿಡಿದಿರುವರು. ವೈರಿಯು ಅಶ್ವರೂಢನಾಗಿದ್ದಾನೆ. ಇದರ ಮೇಲಿನ ಪಟ್ಟಿಕೆಯಲ್ಲಿ ತುರುಗಳಿಂದ ಅಲಂಕರಿಸಲಾಗಿದೆ.

ಎರಡನೆಯ ಪಟ್ಟಿಕೆಯಲ್ಲಿ ಚಾಮರಧಾರೆಯರು ವೀರನನ್ನು ಪಲ್ಲಕ್ಕಿಯಲ್ಲಿ ಕುರಿಸಿಕೊಂಡು ಸ್ವರ್ಗಕ್ಕೆ ಕೊಂಡ್ಯಯುತ್ತಿರುವಂತೆ ಕೆತ್ತಲಾಗಿದೆ. ಮೂರನೆಯ ಪಟ್ಟಿಕೆಯಲ್ಲಿ ಶಿವಲಿಂಗಕ್ಕೆ ಯತಿ ಪೂಜಿಸುತ್ತಿರುವಂತೆ ಇದಕ್ಕೆ ಅಭಿಮುಖವಾಗಿ ವೀರರು ಕೈಮುಗಿದು ಕುಳಿತಿರುವಂತೆ ಕೆತ್ತಲಾಗಿದೆ. ಇದರ ಮೇಲಿನ ಭಾಗದಲ್ಲಿ ಸೂರ್ಯ ಚಂದ್ರ ಇರುವುದನ್ನು ಕಾಣುತ್ತೇವೆ. ಈ ಎರಡು ತುರುಗೋಳ್ ವೀರಗಲ್ಲುಗಳು ಶಿಲೆಯ ಜೈವಿಕ ಶಿಥಿಲೀಕರಣ ಗೊಂಡಿವೆ.

## ಕೊನೆಟಿಪ್ಪಣಿಗಳು

೧. ಅನಂತ ರಂಗಚಾರ ಎನ್., "ಭಾರತೀಯ ಶಿಲ್ಪ ಶಾಸ್ತ್ರದ ಸಂಕ್ಷಿಪ್ತ ಪರಿಚಯ", ಪು. ೩೦೮

೨. ಬಾಲಸುಬ್ರಮಣ್ಯಂ (ಸಂ). "ಕುರುಗೋಡು", ಪು. ೮೮

೩. ಪ್ರಭಾಕರ ಎಸ್., "ದೇವಾಲಯಗಳ ವಾಸ್ತುಚಂದ್ರಿಕೆ", ಪು. ೨೭

೪. ದೇವರಕೊಂಡಾರೆಡ್ಡಿ, "ಭಾರತೀಯ ವಾಸ್ತುವಿದ್ಯ", ಪು. ೮

೫. ಅದೇ, ಪು. ೩-೫

೬. ಅದೇ, ಪು. ೬

೭. ರಾಮಚಂದ್ರರಾವ್ ಎಸ್.ಕೆ., "ಭಾರತದ ದೇವಾಲಯಗಳ ನೆಲೆ-ಹಿನ್ನೆಲೆ", ಪು. ೧

೮. ರಾಮಚಂದ್ರರಾವ್ ಎಸ್.ಕೆ., "ಕೆಲವು ಧಾರ್ಮಿಕ ಕರ್ತವ್ಯಗಳು", ಪು. ೮೦

೯. ಅದೇ, ಪು.೭೭

೧೦. ಸುರೇಶ ಕೆ.ಎಂ. ವಾಸುದೇವ ಬಡಿಗೇರ, ಮಾಡಲಗೇರಿ ಕೊಟ್ರೇಶ, ಸೋಮಶೇಖರ ಎಸ್.ವೈ., "ಕರ್ನಾಟಕ ದೇವಾಲಯಕೋಶ ಬಳ್ಳಾರಿ ಜಿಲ್ಲೆ", ಪು. ೨೦೨

೧೧. ಅದೇ, ಪು. ೧೯೪

೧೨. ವಿರೂಪಾಕ್ಷ ಪೂಜಾರಹಳ್ಳಿ, "ಹೊಡೇಂ ಗ್ರಾಮದ ಪ್ರಾಚ್ಯವಶೇಷಗಳು" ಇತಿಹಾಸ ದರ್ಶನ ೧೫ ಪು.೨೭

೧೩. ಸುರೇಶ ಕೆ.ಎಂ., ಪೂರ್ವೋಕ್ತ, ಪು. ೧೬೭

೧೪. ಅದೇ, ಪು. ೨೦೦

೧೫. ಪಾಪಣ್ಣ, "ಕಂಪಳದೇವರಹಟ್ಟಿ ಗ್ರಾಮದ ಮುಖಂಡರಿಂದ ಮಾಹಿತಿ ಪಡೆಯಲಾಗಿದೆ".

೧೬. ರಾಮಚಂದ್ರರಾವ್ ಎಸ್.ಕೆ., "ಮೂರ್ತಿಶಿಲ್ಪದ ನೆಲೆ-ಹಿನ್ನೆಲೆ", ಪು. ೫೦

೧೭. ಸುರೇಶ ಬಿ., "ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳ ದೇವಾಲಯಗಳು", ಪು. ೨೩೫

೧೮. ತಿಪ್ಪೇರುದ್ರಸ್ವಾಮಿ ಹೆಚ್., "ಕರ್ನಾಟಕದ ಸಂಸ್ಕೃತಿ ಸಮೀಕ್ಷೆ", ಪು. ೫೨೮

೧೯. ಕರಗುಂದ ಟಿ. ಪಂಕಜಾಕ್ಷ, "ಶಿಲ್ಪ ಸೌಂದರ್ಯ", ಪು. ೩

೨೦. ಅದೇ, ಪು. ೩

೨೧. ದತ್ತಾತ್ರೇಯ ಜಿ. ಕುಲಕರ್ಣೀ, "ಹಾವೇರಿ ಜಿಲ್ಲೆಯ ತ್ರಿಕೂಟ ದೇವಲಯಗಳು", ಪು. ೨೩೦

೨೨. ಕರಗುಂದ ಟಿ. ಪಂಕಜಾಕ್ಷ, ಪೂರ್ವೋಕ್ತ, ಪು. ೫

೨೩. ತಿಪ್ಪೇರುದ್ರಸ್ವಾಮಿ ಹೆಚ್., ಪೂರ್ವೋಕ್ತ, ಪು. ೭೨೫

೨೪. ವಿನೋದಾ ಪಾಟೀಲ್, "ಶಿಲ್ಪಗಳಲ್ಲಿ ಶಿವಭಕ್ತರು", ಪು. ೧

೨೫. ಗೋಪಿನಾಥರಾವ್ ಟಿ. ವಿ., "ಎಲಿಮೆಂಟ್ಸ್ ಆಫ್ ಹಿಂದೂ ಐಕ್ನೋಗೋಫಿ", ಸಂ-೨, ಭಾಗ-೧, ಪು. ೭೫

೨೬. ವಿರೂಪಾಕ್ಷ ಪೂಜಾರಹಳ್ಳಿ, ಪೂರ್ವೋಕ್ತ, ಪು. ೨೮

೨೭. ಪಾಡಿಗಾರ ಶ್ರೀನಿವಾಸ, "ಬಾದಾಮಿ ಮತ್ತು ವೈಷ್ಣವಧರ್ಮ", ಪು. ೧೦೭

೨೮. ಭಟ್ ಸೂರಿ ಕೆ.ಜಿ., "ಹಾಡುವಳ್ಳಿ ಜೈನಶಾಸನ ವಾಸ್ತು ಮೂರ್ತಿಶಿಲ್ಪ", ಪು. ೩೭

೨೯. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ, ಪು. ೨೨೦

೩೦. ರಾಜನೀತಿ ಪ್ರಕಾಶ, "ವಾರಣಾಸಿ", ಪು. ೨೦೨

೩೧. ಲಕ್ಷ್ಮಣ ಅಳವಂದಿ, "ಇತಿಹಾಸ ಕೋಶ-೨", ಪು. ೪೪

೩೨. ಕೊಟ್ರೇಶ ಎಂ., "ಬಳ್ಳಾರಿ ಜಿಲ್ಲೆಯ ಕೋಟೆಗಳು", ಪು. ೧೩

೩೩. ಜೋಶಿ ಎಸ್.ಕೆ., "ಕರ್ನಾಟಕ ಕೋಟೆ-ಕೊತ್ತಲುಗಳು", ಪು. ೦೧

೩೪. ಅಂಬಳಿಕೆ ಹಿರಿಯಣ್ಣ (ಪ್ರ.ಸಂ),"ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ", ಪು. ೨೮೧

೩೫. ಅದೇ, ಪು. ೨೮೧

೩೬. ವಸು ಎಂ.ವಿ., "ಕರ್ನಾಟಕ ಚರಿತ್ರೆ ವಿವಿಧ ಆಯಾಮಗಳು", ಪು. ೯೪

೩೭. ಅಂಬಳಿಕೆ ಹಿರಿಯಣ್ಣ (ಪ್ರ.ಸಂ), ಪೂರ್ವೋಕ್ತ, ಪು. ೨೮೧

೩೮. ಕೊಟ್ರೇಶ ಎಂ., ಪೂರ್ವೋಕ್ತ, ಪು. ೫೦

೩೯. ವಿರೂಪಾಕ್ಷ ಪೂಜರಹಳ್ಳಿ, "ಹೊಡೇಂ ಗ್ರಾಮದ ಪ್ರಾಚ್ಯಾವಶೇಷಗಳು, ಇತಿಹಾಸ ದರ್ಶನ ಸಂ-೧೫", ಪು. ೨೭

೪೦. ಕೃಷ್ಣಮೂರ್ತಿ ಪಿ.ವಿ., "ಬೆಂಗಳೂರು ಜಿಲ್ಲಾ ಪರಿಸರದ ಶಾಸನೋಕ್ತ ಕೆರೆಗಳು ಇತಿಹಾಸ ದರ್ಶನ ಸಂ-೨೧", ಪು. ೧೧೭

೪೧. ವಾಸುದೇವನ್ ಸಿ.ಎಸ್., "ಹಂಪಿ ಪರಿಸರದ ಕೆರೆಗಳು", ಪು. ೪೯

೪೨. ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ, "ಕರ್ನಾಟಕ ಶಾಸನಗಳು ಸಂ-೨", ಪು. ೧೫೬

೪೩. ವಿನೋದಾ ಪಾಟೀಲ, "ಕರ್ನಾಟಕದ ಪ್ರಾಚೀನ ಬಾವಿಗಳು", ಪು. ೨೧

೪೪. ಶೇಷಶಾಸ್ತ್ರಿ ಆರ್., "ಕರ್ನಾಟಕ ವೀರಗಲ್ಲುಗಳು", ಪು. ೧೧

೪೫. ಅದೇ, ಪು. ೧೧

೪೬. ಅದೇ, ಪು. ೧೨

೪೭. ಚಿದಾನಂದಮೂರ್ತಿ ಎಂ., "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ", ಪು. ೧

೪೮. ಶೇಷಶಾಸ್ತ್ರಿ ಆರ್., ಪೂರ್ವೋಕ್ತ, ಪು. ೪೦೦

೪೯. ಪರಮಶಿವಮೂರ್ತಿ ಡಿ.ವಿ., "ಕನ್ನಡ ಶಾಸನ ಶಿಲ್ಪ", ಪು. ೧೨

೫೦. ಷ ಶೆಟ್ಟರ್, "ಸಾವನ್ನು ಸ್ವಾಗತಿಸಿ ಸಂ ೧", ಪು. ೧೪

೫೧. ಬಸವರಾಜ ಕಲ್ಗುಡಿ, "ಮಹಾಸತಿ ಆಚರಣೆ ಒಂದು ಅಧ್ಯಯನ", ಪು. ೧೯೮

## ಅಧ್ಯಾಯ ನಾಲ್ಕು :

## ಶಾಸನಗಳು

ಶಾಸನ ಎಂಬ ಪದ ರಾಜರ ಆಜ್ಞೆಗಳನ್ನು ತಿಳಿಸುವ ಬರಹಗಳು ಎಂದು ಕರೆಯಲಾಗುತ್ತದೆ. ಬಹುಕಾಲ ಉಳಿಯುವ ಶಿಲೆ, ಕಲ್ಲು, ತಾಮ್ರ, ಬೆಳ್ಳಿ, ಮುಂತಾದ ಲೋಹಗಳ ಮೇಲೆ ಕೊರೆಯಲ್ಪಟ್ಟ ಬರಹಗಳೇ ಶಾಸನಗಳೆಂದು ಕರೆಯುತ್ತಾರೆ.[೧] ಶಾಸನ ಎಂಬ ಸಾಂಸ್ಕೃತ ಪದಕ್ಕೆ ಆಜ್ಞೆ ಎಂಬುದು ಮೂಲಅರ್ಥವಿದೆ. ಶಾಸ್ ಎಂದರೆ ನಿಯಂತ್ರಿಸು. ಶಿಕ್ಷಿಸು, ಆಜ್ಞಾಪಿಸು ಎಂದು ಅರ್ಥ ನೀಡುತ್ತದೆ. ಶಾಸನ ಎಂಬುವುದಕ್ಕೆ ಈಗಲೂ ಕಾನೂನು ಎಂಬ ಅರ್ಥ ಪ್ರಚಲಿತದಲ್ಲಿರುವುದನ್ನು ನಾವು ಗಮನಿಸಬಹುದು. ಪ್ರಾಚೀನ ಭಾರತದ ಆಡಳಿತದ ಬಗ್ಗೆ ತಿಳಿಸುವ ಗ್ರಂಥಗಳಾದ ಶುಕ್ರನೀತಿಸಾರ, ಕೌಟಿಲ್ಯನ ಅರ್ಥಶಾಸ್ತ್ರ, ಮುಂತಾದ ಗ್ರಂಥಗಳು ಶಾಸನ ಎಂಬ ಪದವನ್ನು ರಾಜಾಜ್ಞೆ ಎಂಬ ಅರ್ಥದಲ್ಲಿ ಪ್ರಯೋಗ ಮಾಡಿದೆ.[೨] ಶಾಸನ ಎಂಬುದು ಮೂಲಭೂತವಾಗಿ ದಾನಕ್ಕೆ ಸಂಬಂದಪಟ್ಟ ರಾಜಾಜ್ಞೆಯಾಗಿತ್ತು.[೩]

ಈ ವ್ಯಾಪಕ ಅರ್ಥದಲ್ಲಿ ಡಿ.ಸಿ ಸರ್ಕಾರ್ ರವರು ಶಾಸನವೆಂದರೆ ಯಾವುದಾದರೊಂದು ಪದಾರ್ಥದ ಮೇಲೆ ಕೊರೆದ ಯಾವುದೇ ಬರಹವು ಅಕ್ಷರ ಎಂದು ಅರ್ಥವಾಗುತ್ತದೆ. ಎಂದಿದ್ದಾರೆ. ಶಾಸನಗಳನ್ನು ಕೇವಲ ಸಂಕುಚಿತ ಅರ್ಥದಲ್ಲಿ ಬಳಕೆ ಮಾಡದೆ ಅದನ್ನು ವಿಶಾಲ ಅರ್ಥದಲ್ಲಿ ಬಳಕೆ ಮಾಡಿದ್ದಾರೆ ಶಾಸನವು ಇತಿಹಾಸದ ಆಧಾರಕ್ಕೆ ಮೂಕ ಸಾಕ್ಷಿಯಾಗಿದೆ. ಕೇವಲ ಸಾಹಿತ್ಯ ನಿರ್ಮಾಣ ಮಾತ್ರ ಶಾಸನಗಳ ಉದ್ದೇಶವಾಗಿದೆ. ದಾನಶಾಸನ, ಪ್ರಶಸ್ತಿಶಾಸನ, ವೀರಗಲ್ಲು, ಮಹಾಸತಿಕಲ್ಲು, ರಾಜಾಜ್ಞೆಗಳು ಅಥವಾ ಆಡಳಿತ ವ್ಯವಸ್ಥೆಯು ಹೊರಡಿಸುವ ಆಜ್ಞೆಗಳು ಮುಂತಾದ ವಿಶಾಲಾರ್ಥದಲ್ಲಿ ಶಾಸನಗಳು ತಮ್ಮ ಕೊಡುಗೆ ನೀಡುತ್ತಾ ಬಂದಿವೆ.

ಶಾಸನ ಒಂದು ಐತಿಹಾಸಿಕ ಮತ್ತು ಪಾರಂಪರಿಕ ಮಾಹಿತಿಯನ್ನು ನೀಡುವ ಪ್ರಮುಖ ಆಧಾರವೆಂದು ಹೇಳಬಹುದು. ಶಾಸನಗಳು ಒಂದು ನಾಡಿನ ಚರಿತ್ರೆಯನ್ನು ಕಟ್ಟಿಕೊಡಬಲ್ಲ ಅದಿಕೃತ ದಾಖಲೆಯಾಗಿದೆ ಒಂದು ಪ್ರದೇಶದ ಇತಿಹಾಸವನ್ನು ತಿಳಿದುಕೊಳ್ಳಬೇಕಾದರೆ ಶಾಸನಗಳಿಗಿಂತ ಪ್ರಮುಖವಾದ ದಾಖಲೆಗಳು ಬೇರೆ ಯಾವುವು ಇಲ್ಲ. ಇತಿಹಾಸ ಕಾಲದ ರಾಜಕೀಯ, ಸಾಮಾಜಿಕ ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ, ಅಂಶಗಳನ್ನು ತಿಳಿಯಲು ಶಾಸನಗಳು ಪ್ರಮುಖ ದಾಖಲೆಗಳಾಗಿವೆ. ವಿದ್ವಾಂಸರು ಶಾಸನಗಳು ಭಾರತೀಯ ಇತಿಹಾಸದ ಜೀವನಾಡಿ ಎಂದು ವರ್ಣಿಸಿದ್ದಾರೆ.

ಒಂದು ಪ್ರದೇಶದ ಸಂಸ್ಕೃತಿಯನ್ನು ಅಧ್ಯಯನ ಮಾಡಬೇಕಾದರೆ ಶಾಸನಗಳು ವಿಶ್ವಾಸರ್ಹ ಆಕಾರಗಳಾಗಿ ನಿಲ್ಲುತ್ತವೆ. ಶಾಸನಗಳು ಆಡಳಿತ ವ್ಯವಸ್ಥೆಯನ್ನು ಸಾಮಾಜದ ರೀತಿ ನೀತಿಗಳನ್ನು ಧರ್ಮದ ಕಟ್ಟುಪಾಡುಗಳನ್ನು ಆರ್ಥಿಕ ಸ್ಥಿತಿಗತಿಗಳನ್ನು ಶಿಕ್ಷಣ, ಯುದ್ಧ ನೀತಿಗಳನ್ನು ದಾನಗಳನ್ನು ಹೀಗೆ ಇನ್ನೂ ಮುಂತಾದ ಅಂಶಗಳನ್ನು ಒಳಗೊಂಡು ರಚನೆಯಾಗಿರುತ್ತದೆ. ಅವುಗಳ ಸಹಾಯದಿಂದ ನಾವು ಸಂಸ್ಕೃತಿಯನ್ನು ಪುನಃ ನಿರ್ಮಿಸಬಹುದಾಗಿದೆ.

ಶಾಸನ ರಚಿಸಲು ಶಿಲೆ, ಲೋಹ ಮಣ್ಣಿನ ವಸ್ತುಗಳು, ದಂತ, ಮರಗಳು ಇತ್ಯಾದಿಗಳನ್ನು ಬಳಸಲಾಗಿದೆ. ಪ್ರಸ್ತುತ ಕರ್ನಾಟಕದಲ್ಲಿ ಕಲ್ಲಿನ ಮೇಲೆ ತಾಮ್ರಪಟಗಳ ಮೇಲೆ, ಸ್ಥಂಬಗಳ ಮೇಲೆ ದೇವಸ್ಥಾನ ಗೋಡೆಗಳ ಮೇಲೆ ವಿಗ್ರಹಪೀಠಗಳ ಮೇಲೆ ರಚಿತಗೊಂಡಿವೆ ಆದರೆ ಕಾನಾಹೊಸಹಳ್ಳಿ ಪರಿಸರದಲ್ಲಿ ಕಲ್ಲಿನಲ್ಲಿರುವ ಶಾಸನಗಳನ್ನು ಕಾಣಬಹುದು.

**ಶಾಸನಗಳ ಉದ್ದೇಶ :**

ಶಾಸನಗಳು ಹಾಕಿಸುವ ಉದ್ದೇಶ ದಾನ–ದತ್ತಿಗಳನ್ನು ತಿಳಿಸುವ, ರಾಜನ ಪ್ರಶಸ್ತಿನ್ನು ವರ್ಣಿಸುವುದು ಆಗಿದ್ದರೂ, ಅಂದಿನ ಸಂಸ್ಕೃತಿಯನ್ನು ತಿಳಿದುಕೊಳ್ಳುವುದು ಇದರ ಮುಖ್ಯ ಉದ್ದೇಶ, ಶಾಸನಗಳಲ್ಲಿ ಕಾಲ ನಿರ್ದೇಶನಗಳಲ್ಲದಿದ್ದರೂ ಲಿಪಿ ದೃಷ್ಟಿಯಿಂದ ಕಾಲ ನಿರ್ದೇಶನ ಮಾಡುವುದು ಇದರ ಇನ್ನೊಂದು ವಿಶೇಷತೆ. ಈ ಶಾಸನಗಳು ಸಮಕಾಲೀನ ದಾಖಲೆಗಳಾಗಿದ್ದರಿಂದ ಕೆಲವೊಮ್ಮೆ ಸಾಹಿತ್ಯಿಕ ಕೃತಿಗಳಲ್ಲಿ ಸಿಗದಂತಾಹ ಕೆಲವೊಂದು ಘಟನಾವಳಿಗಳು ಶಾಸನಗಳಿಂದ ದೊರೆಯುತ್ತವೆ ಬೀದಿಗಳಲ್ಲಿ ಉದ್ಯಾನವನಗಳಲ್ಲಿ, ನಾಲ್ಕು ದಾರಿಗಳು ಕೂಡುವ ಸ್ಥಳಗಳಲ್ಲಿ, ಬಹುಕಾಲ ಉಳಿಯುವಂತೆ ಶಾಸನಗಳನ್ನು ನೆಟ್ಟಿರುವುದನ್ನು ನಾವು ಕಾಣಬಹುದು. ಶಾಸನ ಅಧ್ಯಯನದಲ್ಲಿ ಗದ್ಯವೇ ಪ್ರಧಾನವಾದರು ಭಾಷೆಯ ದೃಷ್ಟಿಯಿಂದ ಲಿಪಿಯ ದೃಷ್ಟಿಯಿಂದ ನೋಡಿದಲ್ಲಿ ಇದರ ಚಾರಿತ್ರಿಕ ಬದಲಾವಣೆ ಗುರುತಿಸಲು ಸಾಧ್ಯವಾಗುತ್ತದೆ. ಶಾಸನಗಳಲ್ಲಿ ವಸ್ತು ವೈವಿದ್ಯತೆ ಇದ್ದಂತೆ ವಿಷಯದಲ್ಲೂ ವೈವಿಧ್ಯತೆಗಳನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಕಾನಾಹೊಸಳ್ಳಿ ಹೋಬಳಿಯಲ್ಲಿ ೦೭ ಶಾಸನಗಳು ದೊರೆತ್ತಿದ್ದವು ಅವು ವಿವಿಧ ಕಡೆ ಪ್ರಕಟಗೊಂಡಿವೆ. ಮತ್ತು ಒಂದು ಅಪ್ರಕಟಿತಗೊಂಡಿದ್ದು ತೃಟಿತಗೊಂಡಿದೆ ಈ ಪರಿಸರದಲ್ಲಿ ದೊರೆತ ಶಾಸನಗಳ ಪಾಠದ ಸಾರಾಂಶವನ್ನು ವಿವರಿಸಲಾಗಿದೆ.

**ದಾನ ಶಾಸನಗಳು :**

ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ದೊರೆತಿರುವ ಶಾಸನಗಳಲ್ಲಿ ಹೆಚ್ಚಾಗಿ ದಾನಶಾಸನಗಳಿವೆ. ಇವುಗಳಲ್ಲಿ ಭೂದಾನವನ್ನು ಕೊಟ್ಟ ವಿಷಯವನ್ನು ತಿಳಿಸುತ್ತದೆ. ಈ ಭೂದಾನವು ಹಿಂದಿನಿದಲೂ ನಡೆದುಕೊಂಡು ಬಂದಂತಹ ಪದ್ದತಿ. ಇದರ ಉದ್ದೇಶ ಒಂದು ಪುಣ್ಯದ ಕೆಲಸವೆಂದು ತಿಳಿದಿದ್ದರು. ಅಂತಹ ಕೆಲಸಗಳಿಂದ ಪುಣ್ಯ ಲಭಿಸುತ್ತದೆ ಹಾಗೂ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆ ನಮ್ಮ ಪೂರ್ವಜರಲ್ಲಿ ಇತ್ತು. ಕಾಲನಂತರ ಇಂತಹ ದಾನಗಳು ಅನ್ಯರಿಂದ ಅಪಹರಿಸಲ್ಪಡುತ್ತಿದ್ದರಿಂದ ಇದನ್ನು ಗಮನಿಸಿದ ರಾಜರು ಕೊಟ್ಟಂತಹ ದಾನಗಳನ್ನು ಶಾಸನಗಳಲ್ಲಿ ದಾಖಲಿಸಲಾರಂಭಿಸಿದರು. ನಂತರ ದಾನ ನೀಡಿದ ಜನರು ತಮ್ಮ ಹೆಸರು ಉಳಿಯಲಿ ಎಂಬ ಕಾರಣಗಳಿಂದ ತಾವು ದಾನಶಾಸನಗಳನ್ನು ಹಾಕಿಸಲು ಪ್ರಾರಂಭಿಸಿದರು. ಕಾನಾಹೊಸಹಳ್ಳಿ ಪರಿಸರದಲ್ಲಿ ದೊರೆತಿರುವ ದಾನಶಾಸನಗಳಲ್ಲಿ ಗ್ರಾಮವನ್ನು ಹಾಗೂ ಭೂಮಿಯನ್ನು ದಾನ ನೀಡಿರುವ ವಿಷಯ ದಾಖಲಾಗಿದೆ, ಕೆರೆಯನ್ನು ನಿರ್ಮಿಸುವುದು, ಗ್ರಾಮದ ಗಡಿಯನ್ನು ಗುರುತಿಸುವುದನ್ನು ಸಹ ಶಾಸನಗಳಲ್ಲಿ ಕಾಣಬಹುದು.

ಸಂಖ್ಯೆ : ೦೧

ಊರು : ದೊಂಬರಹಳ್ಳಿ [ಕಾನಾಹೊಸಹಳ್ಳಿಯ ಉಪಗ್ರಾಮ]

ಸ್ಥಳ : ಆಲದ ಮರದ ಕೆಳಗೆ

ಕಾಲ : ಧಾತು ಅಶ್ವಯುಜು

ರಾಜವಂಶ : ಹೊಯ್ಸಳರು

ರಾಜ : ಪ್ರತಾಪ ಚಕ್ರವರ್ತಿ ವೀರನರಸಿಂಹದೇವ

ಲಿಪಿ ಮತ್ತು ಭಾಷೆ : ಕನ್ನಡ

ಪ್ರಕಟಣೆ : ಆ್ಯ ರಿ ಸೌ ಇ ಎ ೧೯೨೪–೨೫ ಸಂ ೧೯೨೫ ರ ೩೦೦

**ಶಾಸನ ಪಾಠದ ಸಾರಾಂಶ :**

ಈ ಶಾಸನವು ಕಾನಹೊಸಹಳ್ಳಿಯಿಂದ ಹುರುಳಿಹಾಳಗೆ ಹೋಗುವ ಮಾರ್ಗದಲ್ಲಿ ಪಾಳುಬಿದ್ದ ಗ್ರಾಮದ ಹತ್ತಿರ ಆಲದ ಮರದ ಕೆಳಗೆ ಬಿದ್ದಿರುವ ಕಲ್ಲಿನ ಮೇಲಿದೆ. ಲಿಪಿಯು ಕನ್ನಡ ಭಾಷೆಯಲ್ಲಿದ್ದು ಎರಡು ಸಾಲುಗಳ ಅಸ್ಪಷ್ಟವಾಗಿದೆ. ಈ ಶಾಸನವು ವೀರನರಸಿಂಹದೇವನ ದಂಡನಾಯಕನಾದ ವಿಮಿಡಿನಾಯಕನು ಯತಿಮಂಚುವಿನ ಗುರಮ್ಮನಿಗೆ ಒಂದು ಗ್ರಾಮವನ್ನು ದಾನ ನೀಡಿದ್ದನ್ನು ದಾಖಲಿಸುವಂತೆ ತೋರುತ್ತದೆ.[೧]

ಸಂಖ್ಯೆ : ೦೨

ಊರು ; ಹುರುಳಿಹಾಳು

ಸ್ಥಳ : ಗ್ರಾಮದ ನೈರುತ್ಯಕ್ಕೆ ಹೊಲದಲ್ಲಿದೆ

ಕಾಲ : ಧಾತು ಆಶ್ವಯುಜು

ರಾಜವಂಶ : ಹೋಯ್ಸಳರು

ರಾಜ : ಪ್ರತಾಪ ಚಕ್ರವರ್ತಿ ವೀರನರಸಿಂಹದೇವ

ಲಿಪಿ ಮತ್ತು ಭಾಷೆ : ಕನ್ನಡ

ಪ್ರಕಟಣೆ : ಆ್ಯ ರಿ ಸೌ ಇ ಎ ೧೯೨೪ -೨೫ ಸಂ ೧೯೨೫ ರ ೨೯೬

ಈ ಶಾಸನವು ನೈರುತ್ಯಕ್ಕೆ ಹೊಲದಲ್ಲಿ ನಿಲ್ಲಿಸಿರುವ ಕಲ್ಲಿನ ಮೇಲಿದೆ ಲಿಪಿಯು ಹಾಳಾಗಿದೆ. ವೀರನರಸಿಂಹದೇವನ ದ್ವಾರಸಮುದ್ರವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ಮಾಡುವ ಸಂದರ್ಭದಲ್ಲಿ ಬಳದೇವರಿಗೆ ನೀಡಿದ ದಾನವನ್ನು ಉಲ್ಲೇಖಿಸುವಂತೆ ತೋರುತ್ತದೆ.

ಸಂಖ್ಯೆ : ೦೩

ಊರು ; ಕತ್ರಿಕೆಹಟ್ಟಿ [ತಿಪ್ಪೆಹಳ್ಳಿಯ ಉಪಗ್ರಾಮ]

ಸ್ಥಳ : ಬಾವಿಯ ಹತ್ತಿರ

ಕಾಲ : ಧಾತು ಆಶ್ವಯುಜು

ರಾಜವಂಶ : ಹೋಯ್ಸಳರು

ರಾಜ : ಪ್ರತಾಪ ಚಕ್ರವರ್ತಿ ವೀರನರಸಿಂಹದೇವ

ಲಿಪಿ ಮತ್ತು ಭಾಷೆ : ಕನ್ನಡ

ಪ್ರಕಟಣೆ : ಆ್ಯ ರಿ ಸೌ ಇ ಎ ೧೯೨೪ -೨೫ ಸಂ ೧೯೨೫ ರ ೨೯೮

ಶಾಸನದ ಪಾಠದ ಸಾರಾಂಶ :- ಈ ಶಾಸನವು ಕತ್ರಿಕಹಟ್ಟಿ ಗ್ರಾಮದ ನೈರುತ್ಯ ದಿಕ್ಕಿನ ಸಿಹಿ ನೀರಿನ ಬಾವಿಯ ಹತ್ತಿರ ಬಿದ್ದರುವ ಕಲ್ಲಿನ ಮೇಲಿದೆ ಎರಡು ಸಾಲುಗಳು ಕನ್ನಡ ಲಿಪಿಯಲ್ಲಿದ್ದು ಅಲ್ಪಸ್ವಲ್ಪ ಹಾಳಾಗಿದೆ ಹೊಯ್ಸಳರು ವೀರನರಸಿಂಹದೇವನ ಆಳ್ವಿಕೆಯ ಸಂಧರ್ಭದಲ್ಲಿ ಮುದು-ವೀರಪನ ಮಗ ಮುದು ಬಸಪ್ಪನು ಭೂಮಿ ಧಾನ ನೀಡಿದ್ದನ್ನು ತಿಳಿಸುತ್ತದೆ.[೫]

ಸಂಖ್ಯೆ : ೦೪

ಊರು ; ಲೋಕಿಕೆರೆ

ಸ್ಥಳ : ಕೆರೆ ಏರಿಯ ಹಿಂಭಾಗದಲ್ಲಿ

ಕಾಲ : ೧೩ನೇ ಶತಮಾನ

ರಾಜವಂಶ : ಹೋಯ್ಸಳರು

ರಾಜ : ಪ್ರತಾಪ ಚಕ್ರವರ್ತಿ ವೀರನರಸಿಂಹದೇವ

ಲಿಪಿ ಮತ್ತು ಭಾಷೆ : ಕನ್ನಡ

ಪ್ರಕಟಣೆ : ಆ್ಯ ರಿ ಸೌ ಇ ಎ ೧೯೨೪ –೨೫ ಸಂ ೧೯೨೫ ರ ೨೯

ಶಾಸನದ ಪಾಠ :

೧. ಶ್ರೀ ರತ್ನ ಭೂಸ [ಷ]

೨. ಣ---ಭಟಾರ

೩. ರ ಪ್ರಿಯ ಶಿ..

ಶಾಸನ ಪಾಠದ ಸಾರಾಂಶ :

ಈ ಶಾಸನವು ಶ್ರೀ ರತ್ನ ಭೂಷಣ ಭಟಾರಕನ ಪ್ರೀತಿಯ ಶಿಷ್ಯ ಲೋಕೆಯಕೆರೆಯ ಮರಗೊಂಡನ ನಿಸಿದಿ ತಿಳಿಸುತ್ತದೆ. ಹೊಯ್ಸಳರ ವೀರನರಸಿಂಹದೇವನ ದಂಡನಾಯಕನಾದ ಶ್ರೀ ರತ್ನ ಭೂಷಣ ಭಟಾರಕನ ಶಿಷ್ಯನು ಲೋಕಿಕೆರೆಯನ್ನು ಪುನಃ ಮರುನಿರ್ಮಾಣ ಮಾಡಿರುವುದನ್ನು ಉಲ್ಲೇಖಿಸುತ್ತದೆ.[6] ನನ್ನ ಕ್ಷೇತ್ರಕಾರ್ಯದ ಸಂಧರ್ಭದಲ್ಲಿ ಇದನ್ನು ಗುರುತಿಸಲಾಗಿದೆ ಈ ಶಾಸನವನ್ನು ನಿದಿಗಳ್ಳರು ಕಿತ್ತು ಕೆರೆಯ ಏರಿಯ ಕೆಳಗಿನ ಜಾಲಿ ಮರಗಳ ಪೊದೆಯಲ್ಲಿ ಬಿಸಾಡಿದ್ದಾರೆ. ಅದು ಹಾಳಾಗುವ ಸಂದರ್ಭದ ಅಂಚಿನಲ್ಲಿದೆ. ಶಾಸನಗಳು ಇತಿಹಾಸ ರಚನೆಗೆ ಪ್ರಮುಖವಾಗಿದ್ದು. ಅವುಗಳ ಸಂರಕ್ಷಣೆಯು ಅಗತ್ಯವಾಗಿದೆ.

ಸಂಖ್ಯೆ : ೦೫

ಊರು ; ಮೊಲೆನೂರು [ಕೆಂಚಮಲ್ಲನಹಳ್ಳಿಯ ಉಪಗ್ರಾಮ]

ಸ್ಥಳ : ಗ್ರಾಮದ ಪ್ರವೇಶ ದ್ವಾರದಲ್ಲಿನ ಕಲ್ಲಿನ ಮೇಲೆ

ಕಾಲ : ಧಾತು ಆಶ್ವಯಜ

ರಾಜವಂಶ : ಹೋಯ್ಸಳರು

ರಾಜ : ಪ್ರತಾಪ ಚಕ್ರವರ್ತಿ ವೀರನರಸಿಂಹದೇವ

ಲಿಪಿ ಮತ್ತು ಭಾಷೆ : ಕನ್ನಡ

ಪ್ರಕಟಣೆ : ಆ್ಯ ರಿ ಸೌ ಇ ಎ ೧೯೨೪ –೨೫ ಸಂ ೧೯೨೫ ರ ೨೮

ಶಾಸನ ಪಾಠದ ಸಾರಾಂಶ :

ಈ ಶಾಸನದಲ್ಲಿ ಮಹಾಮಂಡಳೇಶ್ವರ ಘಟ್ಟದೇ(ವರ)ಸನ್ನನ್ನೋಳಗೊಂಡ ಕೆಲವು ಜನರ ಉಪಸ್ಥಿತಿಯಲ್ಲಿ ಮಲ್ಲಣನು ಗಡಿಯ ಮೇಲೆ ನಡೆದ ನಂತರ ಮಾಲನೂರು ಗ್ರಾಮದ ಗಡಿಯನ್ನು ಗೊತ್ತುಪಡಿಸಿದ್ದನ್ನು ತಿಳಿಸುತ್ತದೆ.

ಸಂಖ್ಯೆ : ೦೬
ಊರು ; ಹೂಡೇಂ
ಸ್ಥಳ : ಬೋರಪ್ಪನ ಹೊಲದಲ್ಲಿದೆ
ಕಾಲ : ಕ್ರಿಶ ೫-೫-೧೭೧೨
ಪ್ರಕಟಣೆ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨ ಶಾಸನ ಸಂಖ್ಯೆ ೩೧
ಶಾಸನ ಪಾಠ :

೧ ಶ್ರೀ ಶುಭಮಸ್ತು ಶಾಲಿವಾಹನ ಸಖ

೨ ವರುಷ ೧೬೪೩ ನೇಯ ನಂದನ ಸಂ/ವೈಖಾ

೩ ಖ.ಶು.೧೦ ಲು ಶ್ರೀ ಮಂನ್ಮಹಾ ನಾಯಕಚಾ

೪ ರ್ಯ ಬಾಗಳಿ ಹರಿಯಂ ಮಾಜಿಯವರು ಕೊಟ್ಟೂ

೫ ರ ಬಸವೇಶ್ವರ ದೇವರ ಧರ್ಮ ದಾಸೋಗಕೆ

೬ ಎಥಿನಹಾಳ ಗ್ರಾವನೂಲ್ಲಿಂಗಾಸ್ತಪಿತಾವಾ

೭ ಮಾಡಿಕೊಟು ಯಿದಿತು ಶ್ರೀ

ಶಾಸನ ಪಾಠದ ಸಾರಾಂಶ :

ಈ ಶಾಸನವು ಶ್ರೀಶುಭಮಸ್ತು ಶಾಲಿವಾನ ಶಕವರ್ಷ ೧೬೪೩ ನೇಯ ನಂದನ ವೈಶಾಕ ಶುಕ್ಲ ೧೦ ಎಂದಿದ್ದ ಇದು ಕ್ರಿಶ ೫-೫-೧೭೧೨ ಕ್ಕೆ ಸರಿ ಹೊಂದುತ್ತದೆ. ಶ್ರೀಮನ್ಮಹಾ ನಾಯಕಚಾರ್ಯ ಕಾಲದಲ್ಲಿ ಬಾಗಳಿಯ ಹರಿಯಮ್ಮಾಜಿಯು ಕೊಟ್ಟೂರು ಬಸವೇಶ್ವರ ದೇವರ ಧರ್ಮ ದಾಸೋಹಕ್ಕೆ ಎಥಿನಹಾಳ ಗ್ರಾಮವನ್ನು ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೭]

ಅಪ್ರಕಟಿತ ಶಾಸನ :

ಸಂಖ್ಯೆ : ೦೭

ಊರು :ಹಾರಕ ಬಾವಿ

ಸ್ಥಳ : ಚೌಡೇಶ್ವರಿ ದೇವಾಸ್ಥಾನದಲ್ಲಿ

ಈ ಶಾಸನವು ಹಾರಕಬಾವಿ ಗ್ರಾಮದ ಚೌಡೇಶ್ವರಿ ದೇವಾಲಯವನ್ನು ಪ್ರವೇಶಿಸುವಾಗ ಗೋಪುರದ ಬಲಬದಿಯಲ್ಲಿ ಶಾಸನವಿರುವ ಚಪ್ಪಡಿಕಲ್ಲನ್ನು ನೀಳವಾಗಿ ನಿಲ್ಲಿಸಿದ್ದಾರೆ. ಈ ಶಾಸನದಲ್ಲಿ ಸೂರ್ಯ, ಚಂದ್ರ, ಶಿವಲಿಂಗವನ್ನು ಕಾಣಬಹುದು. ಲಿಪಿಯು ಅಸ್ಪಷ್ಟವಾಗಿದ್ದು ಶಾಸನದ ಸುತ್ತಲೂ ಒಂದು ಗೆರೆಯಾಕಾರದ ಪಟ್ಟಿಗೆ ಇದೆ, ಈ ಶಾಸನವು ತ್ರುಟಿತಗೊಂಡಿದೆ.

## ಕೊನೆ ಟಿಪ್ಪಣಿಗಳು

೧. ಶೇಷಶಾಸ್ತ್ರಿ ಆರ್. ಶಾಸನ ಪರಿಚಯ. ಪು. ೧

೨. ಚಿದಾನಂದ ಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೨

೩. ಇಂದುಮತಿ ಪಿ.ಪಾಟೀಲ, ಪ್ರಾಚೀನ ಭಾರತ ಇತಿಹಾಸ. ಪು. ೫೪

೪. ಚನ್ನಬಸಪ್ಪ ಎಸ್ ಪಾಟೀಲ ಮತ್ತು ವಿನೋದ ಪಾಟೀಲ, ಕರ್ನಾಟಕ ಶಾಸನ ಸಂ. ೦೨ ಬಳ್ಳಾರಿ ಜಿಲ್ಲೆಯ ಶಾಸನಗಳು. ಪು. ೧೫೩

೫. ಅದೇ.... ಪು. ೧೫೪

೬. ದೇವರ ಕೊಂಡಾರೆಡ್ಡಿ. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ –೧. ಬಳ್ಳಾರಿ ಜಿಲ್ಲೆ ಶಾಸನ ಸಂಖ್ಯೆ ೨೧. ಕೂಡ್ಲಗಿ ತಾಲೂಕು ಪು. ೨೨೪

೭. ದೇವರಕೊಂಡಾರೆಡ್ಡಿ ಕೆ.ಜಿ ಭಟಸೂರಿ ಕಲವೀರ ಮನ್ವಾಚಾರ ಪರಮಶಿವಮೂರ್ತಿ ಹಂಪಿ ಶಾಸನಗಳು ಸಂ ೩ . ಶಾಸನ ಸಂಖ್ಯೆ ೩೧ ಕೂಡ್ಲಗಿ ತಾಲೂಕು ಪು. ೨೯೫

## ಅಧ್ಯಾಯ ಐದು :

## ಸಮಾರೋಪ

ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಕಾನಹೊಸಹಳ್ಳಿ ಹೋಬಳಿ ಪರಿಸರವು ಭವ್ಯವಾದ ಇತಿಹಾಸ ಪರಂಪರೆಗಳಿಂದ ಕೂಡಿದ್ದು ಪ್ರತಿಯೊಂದು ಹಳ್ಳಿಗಳು ಸಹ ಭಾರತೀಯ ಸಂಸ್ಕೃತಿಗೆ ತಮ್ಮದೇಯಾದಂತಹ ಕೊಡುಗೆಯನ್ನು ನೀಡಿವೆ. ಸ್ಥಳಿಯ ಇತಿಹಾಸದಿಂದ ಹಲವಾರು ಅಂಶಗಳು ಬೆಳಕಿಗೆ ಬಂದಿವೆ ವಿವಿಧ ಪ್ರದೇಶಗಳಲ್ಲಿ ಜನರ ಜೀವನ ವಿಧಾನ ಧರ್ಮ ಸಂಸ್ಕೃತಿ, ಆಚರಣೆ, ಇತ್ಯಾದಿಗಳಲ್ಲಿ ಭಿನ್ನತೆಗಳಿವೆ. ಇವುಗಳನ್ನು ಒಟ್ಟುಗೂಡಿಸಿ ನಾಡಿನ ಇತಿಹಾಸವನ್ನು ನಿರ್ಮಿಸಬೇಕಾಗಿದೆ. ಇಂತಹ ಇತಿಹಾಸ ಮತ್ತು ಪುರಾತತ್ವೀಯ ಪರಂಪರೆಯನ್ನು ಒಳಗೊಂಡಿರುವ ಹೋಬಳಿಗಳ ಪೈಕಿ ಕಾನಾಹೊಸಹಳ್ಳಿ ಒಂದು.

ಇತಿಹಾಸ ಮತ್ತು ಪುರಾತತ್ವ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅನೇಕ ಬಿಡಿ ಬಿಡಿ ಲೇಖನಗಳು ಅಧ್ಯಯನಗಳು ನಡೆದಿವೆ. ಆದರೆ ಕಾನಾಹೊಸಹಳ್ಳಿ ಹೋಬಳಿ ಪರಿಸರದ ಪುರಾತತ್ವೀಯ ಅಧ್ಯಯನ ಕುರಿತು ಈ ವರೆಗೆ ವಿವರವಾದ ಅಧ್ಯಯನಗಳು ನಡೆದಿರುವುದು ತೀರ ಕಡಿಮೆ. ಪ್ರಸ್ತುತ ಅಧ್ಯಯನದ ಮೂಲಕ ಅಂತಹ ಒಂದು ಪ್ರಯತ್ನವನ್ನು ಮಾಡಲಾಗಿದೆ. ಇಲ್ಲಿನ ಪುರಾತತ್ವೀಯ ಅಧ್ಯಯನವನ್ನು ವಿವರಣಾತ್ಮಕವಾಗಿ ಕಟ್ಟಿಕೊಡುವ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು ಕ್ಷೇತ್ರಕಾರ್ಯದ ಮೂಲಕ ಐತಿಹಾಸಿಕ ಹಿನ್ನೆಲೆಯಲ್ಲಿ ಸ್ಥಳನಾಮಗಳು ಪ್ರಾಗಿತಿಹಾಸಕಾಲದ ಚಾರಿತ್ರಿಕ ಹಿನ್ನೆಲೆಯಲ್ಲಿ ವೀರಗಲ್ಲುಗಳು, ಮಹಾಸತಿಕಲ್ಲುಗಳು, ಶಾಸನಗಳು, ಕೋಟೆ, ಕೆರೆಕಟ್ಟೆ ಮತ್ತು ಬಾವಿಗಳ ಕುರಿತು ಅಧ್ಯಯನ ನಡೆಸಲಾಯಿತು ಒಟ್ಟಿನಲ್ಲಿ ಈ ಪ್ರದೇಶದ ಪುರಾತತ್ವ ಅವಶೇಷಗಳನ್ನು ಅರಿತುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಕಾನಾಹೊಸಹಳ್ಳಿ ಹೋಬಳಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನದಿಂದ ಅನೇಕ ಮಹತ್ವದ ಅಂಶಗಳು ಬೆಳಕಿಗೆ ಬಂದಿವೆ. ಒಂದು ಪ್ರದೇಶದ ಉನ್ನತಿಗೆ ಹಲವಾರು ಅಂಶಗಳು ಕಾರಣವಾಗುತ್ತವೆ.

ಅಧ್ಯಾಯ ಒಂದರಲ್ಲಿ ಅಧ್ಯಯನಕ್ಕೆ ಸಂಬಂದಿಸಿದಂತೆ ಪೀಠಿಕೆ ಉದ್ದೇಶ, ವ್ಯಾಪ್ತಿ, ಮಹತ್ವ, ವಿಧಾನ, ಈವರೆಗಿನ ಅಧ್ಯಯನಗಗಳು ಸಮಿಕ್ಷೆ ಮತ್ತು ಅಧ್ಯಯನದ ಸ್ವರೂಪ ಇವುಗಳ ಬಗ್ಗೆ ಸವಿವರವಾಗಿ ವಿವರಿಸಲಾಗಿದೆ. ಒಂದು ಪ್ರದೇಶದ ಉನ್ನತಿಗೆ ಅಲ್ಲಿನ ಭೌಗೋಳಿಕ ಪರಿಸರ ಕೂಡ ಬಹುಮುಖ್ಯವಾಗಿದೆ. ಮಾನವನ ಅಲೆಮಾರಿ ಜೀವನದಿಂದ ಹಿಡಿದು ಕ್ರಮೇಣ ಒಂದು

ಸುಸಂಬದ್ಧವಾದ ಸಾಮಾಜಿಕ ವ್ಯವಸ್ಥೆ ನಿರ್ಮಾಣವಾಗುವಲ್ಲಿ ಅಲ್ಲಿನ ಪರಿಸರ ಬಹಳ ಮುಖ್ಯವಾಗುತ್ತದೆ. ಹಾಗಾಗಿ ಭೌಗೋಳಿಕ ಹಿನ್ನೆಲೆಯಲ್ಲಿ ಭೌಗೋಳಿಕ ಪರಿಸರ, ಬೆಟ್ಟಗುಡ್ಡ, ಹವಾಗುಣ, ಜಲಮೂಲ, ಸಸ್ಯಸಂಪತ್ತು , ಪ್ರಾಣಿಸಂಪತ್ತು, ಅರಣ್ಯ, ಬೆಳೆಗಳು ಐತಿಹ್ಯಗಳ ಹಿನ್ನಲೆಯಲ್ಲಿ ಸ್ಥಳನಾಮಗಳು,ನಂತರ ಪ್ರಾಗಿತಿಹಾಸಿ ಕಾಲದ ನೆಲೆಗಳನ್ನು ಗುರುತಿಸಲಾಗಿದೆ.

ಹಳೇಯಶಿಲಾಯುಗದ ಸಂಸ್ಕೃತಿಯಲ್ಲಿ ಆದಿಹಳೇಶಿಲಾಯುಗ ಮಧ್ಯಹಳೇಶಿಲಾಯುಗ ಅಂತ್ಯ ಹಳೇಶಿಲಾಯುಗ , ಮತ್ತು ಸೂಕ್ಷ್ಮಶಿಲಾಯುಗ ಸಂಸ್ಕೃತಿ ನವಶಿಲಾಯುಗ ಸಂಸ್ಕೃತಿಯಲ್ಲಿ ಬೂದಿದಿಬ್ಬಗಳು ಬೃಹತ್ ಶಿಲಾಯುಗ ಸಂಸ್ಕೃತಿಯಲ್ಲಿ ಸಮಾಧಿಕೋಣೆಗಳು ಮೃತ್ಪಾತ್ರೆಗಳು ಕಂಡುಕೊಳ್ಳಲಾಗಿದೆ. ಕಾನಾಹೊಸಹಳ್ಳಿ ಪರಿಸರದಲ್ಲಿರುವ ಪ್ರಾಗೈತಿಹಾಸಿಕ ನೆಲೆಗಳ ಮಹತ್ವವನ್ನು ಕುರಿತು ಅಧ್ಯಯನ ಮಾಡಲಾಗಿದೆ. ಅವುಗಳೆಂದರೆ ತೊರೆಕಲ್ಲಹಳ್ಳಿ, ಕುಮತಿ, ಜುಮ್ಮೊಬನಹಳ್ಳಿ, ಓಬಳಪುರ, ಸುಣ್ಣಮರಡಿ, ಮಾಳೆಹಳ್ಳಿಗಳಾಗಿವೆ. ಚಿನ್ನ ಹಗರಿ ನದಿದಂಡೆಯ ಮೇಲೆ ಒಂದಲ್ಲ ಒಂದು ರೀತಿಯಾದ ಅವಶೇಷಗಳು ದೊರೆತಿವೆ. ಹಾಗೂ ಅವುಗಳೆಂದರೆ ಕಪ್ಪು, ಕೆಂಪು ಮತ್ತು ಕಪ್ಪು ಮಡಿಕೆ ಚೂರುಗಳು ಹಾಗೂ ಬೂದಿಯ ಕಿಟ್ಟುಗಳು ದೊರಕಿವೆ. ಪ್ರಸ್ತುತ ಅಧ್ಯಯನ ಪ್ರದೇಶವಾದ ತೊರೆಕಲ್ಲಹಳ್ಳಿ ನೆಲೆಯಲ್ಲಿ ಬೂದಿದಿನ್ನೆಯ ಅವಶೇಷಗಳು ಕಂಡು ಬಂದಿದ್ದು ಈ ಬೂದಿದಿನ್ನೆಯ ಭಾಗದಲ್ಲಿ ಮೃತ್ಪಾತ್ರೆಗಳು ಕಂಡುಬಂದಿವೆ. ಹಾಗೂ ಮಾಳೆಹಳ್ಳಿಯಲ್ಲಿ ಜಿಂಕೆ, ಮತ್ತು ಹಾವಿನ ಚಿತ್ರಗಳು ಕಾಣುತ್ತವೆ. ಹೀಗೆ ಹಳೆಯ ಶಿಲಾಯುಗದಲ್ಲಿ ಅಲೆಮಾರಿಯಾಗಿದ್ದ ಮಾನವ ನವಶಿಲಾಯುಗದ ವೇಳೆಗೆ ಒಂದು ಕಡೆ ನೆಲೆ ನಿಂತನು. ನಂತರ ಹಂತ ಹಂತವಾಗಿ ಸಮಾಜಿಕ ಬದುಕನ್ನು ಕಟ್ಟಿಕೊಂಡು ಆಳ್ವಿಕೆಯನ್ನು ಪ್ರಾರಂಬಿಸಿದನು ರಾಜಕೀಯ ಇತಿಹಾಸದಿಂದ ಅನೇಕ ರಾಜ ವಂಶಗಳ, ಸಾಮ್ರಾಜ್ಯಗಳು ಆಳ್ವಿಕೆಯನ್ನು ವಿವರಿಸಲಾಗಿದೆ.

ಅಧ್ಯಾಯ ಮೂರರಲ್ಲಿ ದೇವಾಲಯ ವಾಸ್ತುಶಿಲ್ಪ, ಧಾರ್ಮಿಕಮೂರ್ತಿಶಿಲ್ಪ, ರಕ್ಷಣಾವಾಸ್ತುಶಿಲ್ಪ ಹಾಗೂ ಸ್ಮಾರಕಶಿಲ್ಪಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಉತ್ತಮವಾದಂತಾಹ ಕಲೆ ಮತ್ತು ವಾಸ್ತುಶಿಲ್ಪವನ್ನು ಹೊಂದಿರುವ ಶೈವ ೨೨, ವೈಷ್ಣವ ೦೩, ಹಾಗೂ ಶಾಕ್ತ ೦೩ ದೇವಾಲಯಗಳು ಇಲ್ಲಿವೆ. ದೇವಾಲಯಗಳಿಗೆ ಸಂಬಂದಿಸಿದಂತೆ ಕ್ಷೇತ್ರವೀಕ್ಷಣೆಯ ಮೂಲಕ ವಾಸ್ತುವಿನ್ಯಾಸವನ್ನು ಗಮನಿಸಲಾಗಿದೆ. ಈ ಹೋಬಳಿಯಲ್ಲಿ ಅಧಿಕ ಸಂಖ್ಯೆಯಲ್ಲಿ ದೇವಾಲಯಗಳಿದ್ದರೂ ಕೆಲವು ದೇವಾಲಯಗಳ ಕಲಾ ಶ್ರೇಷ್ಠತೆಯನ್ನು ಪಡೆದಿದೆ ಅಂತವುಗಳಲ್ಲಿ ಹುಲಿಕೆರೆ, ಕಾನಾಮಡುಗು, ಬಣವಿಕಲ್ಲು, ತೊರೆಕಲ್ಲಹಳ್ಳಿ ಎನ್ನಬಹುದು ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಕಲ್ಯಾಣ ಚಾಳುಕ್ಯ, ವಿಜಯನಗರ ಮತ್ತು

ವಿಜಯನಗರೋತ್ತರ ಹಾಗೂ ಪಾಳೆಯಗಾರರಶೈಲಿಯ ದೇವಾಲಯಗಳಿವೆ. ಪ್ರಸ್ತುತ ಅಧ್ಯಯನದ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳನ್ನು ನಿದಿಗಳ್ಳರು ಹಾಳು ಮಾಡಿರುವುದು ಗುರುತಿಸಲಾಗಿದೆ. ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಹೆಚ್ಚಾಗಿ ಶೈವ ದೇವಾಲಯಗಳು ಇರುವುದನ್ನು ಗುರುತಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಕಂಡುಬರುವ ದೇವಾಲಯಗಳಲ್ಲಿ ಹಲವು ಮೂರ್ತಿಗಳನ್ನು ಕಾಣಬಹುದು ಕೆಲವು ಸುವ್ಯವಸ್ಥಿತವಾಗಿವೆ. ಇನ್ನೂ ಕೆಲವು ನಿದಿಗಳ್ಳರು ನಾಶಮಾಡಿದ್ದಾರೆ. ಹಾಗೂ ಕೆಲವು ಮೂರ್ತಿಗಳನ್ನು ತೆಗೆದುಕೊಂಡು ಹೋಗಿದ್ದಾರೆ ಎಂಬ ಅಭಿಪ್ರಾಯವನ್ನು ಸ್ಥಳಿಯರು ತಿಳಿಸುವಹಾಗೆ ಮತ್ತು ನನ್ನ ಕ್ಷೇತ್ರಕಾರ್ಯದ ಸಂರ್ಭದಲ್ಲಿ ಕಂಡುಬಂದಿದೆ ಶೈವ, ವೈಷ್ಣವ, ಜೈನ, ಶಾಕ್ತ ಮತ್ತು ಇತರೆ ಶಿಲ್ಪಗಳೆಂದು ವಿಭಾಗಿಸಿಕೊಂಡು ಅಧ್ಯಯನ ಮಾಡಿದ್ದಾನೆ. ಇವುಗಳಲ್ಲಿ ಶೈವ ಶಿಲ್ಪಗಳು ಹೆಚ್ಚಾಗಿ ಕಂಡುಬಂದಿವೆ ಇದರಿಂದ ಈ ಪ್ರದೇಶದಲ್ಲಿ ಶೈವ ಧರ್ಮ ಪ್ರಬಲವಾಗಿತ್ತೆಂದು ತಿಳಿಯಬಹುದು. ಇದಕ್ಕೆ ಅನುಗುಣವಾಗಿ ವಿವಿಧ ಬಗೆಯ ಶಿವಲಿಂಗಗಳು, ನಂದಿಶಿಲ್ಪಗಳು ಕಂಡು ಬಂದಿವೆ. ವೈಷ್ಣವ ಮೂರ್ತಿಗಳಾದ ಆಂಜನೇಯ, ವಿಷ್ಣು, ಕೇಶವ ಶಿಲ್ಪಗಳು ಕಾಣಬಹುದು. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸದಾಗೆ ಶೈವ ಶಿಲ್ಪಗಳಿಗೆ ಹೋಲಿಸಿದರೆ ವೈಷ್ಣವ ಶಿಲ್ಪಗಳು ದೊರೆತಿರುವುದು ತೀರ ವಿರಳವಾಗಿವೆ.

ರಕ್ಷಣಾವಾಸ್ತುಶಿಲ್ಪ ಹಿನ್ನೆಲೆಯಲ್ಲಿ ಕೋಟೆಗಳು, ಬುರುಜುಗಳು, ಹುಡೇವುಗಳು ಕೆರೆಕಟ್ಟೆ – ಬಾವಿಗಳು ಕುರಿತು ಅಧ್ಯಯನ ಮಾಡಲಾಗಿದೆ. ಈ ಕೋಟೆ ಕೊತ್ತಲಗಳ ಮೇಲೆ ನಿಂತುಕೊಂಡರೇ ಶತ್ರುಗಳ ಚಲನವಲನಗಳನ್ನು ಗಮನಿಸುತ್ತಿರಬಹುದು. ಹಾಗಾಗಿ ಗ್ರಾಮದ ರಕ್ಷಣೆಗೆ ಹೆಚ್ಚಿನ ಆದ್ಯತೆ ನೀಡಿದ್ದರೆಂದು ತಿಳಿದು ಬರುತ್ತದೆ. ಕಾನಾಹೊಸಹಳ್ಳಿ ಹೋಬಳಿ ಪರಿಸರ ವ್ಯಾಪ್ತಿಯಲ್ಲಿರುವ ಪಾಲಯ್ಯನಕೋಟೆ, ಹೊಡೇಂಂನ ಬುರುಜುಗಳು, ಹುಡೆವುಗಳು, ಕುಮತಿ ಕೋಟೆ, ಕಟ್ಟಿಂಗೆಹಳ್ಳಿ, ಪಾಡೂರನ್ನು ಗುರುತಿಸಲಾಗಿದ್ದು ಕೋಟೆಯ ಅವಶೇಷಗಳನ್ನು ಕಾಣಬಹುದು. ನನ್ನ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಕೆಲವು ಕೋಟೆಗಳು ಭಗ್ನಗೊಂಡ ಮತ್ತು ನೆಲಸಮವಾಗಿರುವುದನ್ನು ಗುರುತಿಸಲಾಗಿದೆ.

ಇನ್ನೂ ಕೆಲವು ವಿನಾಶದ ಅಂಚಿನಲ್ಲಿ ಅಳಿದು–ಉಳಿದುಕೊಂಡಿರುವ ಅವಶೇಷಗಳ ಆಧಾರದ ಮೇಲೆ ಈ ಹೋಬಳಿ ಪರಿಸರದ ರಕ್ಷಣಾವಾಸ್ತುಶಿಲ್ಪ ವೈಭವವನ್ನ ಕಟ್ಟಿಕೊಡಲಾಗಿದೆ. ಈ ಭಾಗದ ಜನರು ನೀರು ಸಂಗ್ರಹಣೆಗಾಗಿ ಕೆರೆಬಾವಿಗಳನ್ನು ಕಟ್ಟುತ್ತಿದ್ದರು. ಈ ಪರಿಸರದಲ್ಲಿನ ಕೆರೆ ಬಾವಿಗಳನ್ನು ಅಧ್ಯಯನ ಮಾಡಲಾಗಿದೆ ಅವುಗಳಲ್ಲಿ ಪ್ರಮುಖವಾಗಿ ಕಾನಾಹೊಸಹಳ್ಳಿ,

ಹುಲಿಕೆರೆ, ಲೋಕಿಕೆರೆ, ಚೌಡಪುರ ಕೆರೆ, ಇಮ್ಮಡಪುರ ಕೆರೆ ಹಾಗೂ ಕಲ್ಲಹಳ್ಳಿಯ ಕಪಿಲೆಬಾವಿ ಇತ್ಯಾದಿ ಇಂತಹ ಕೆರೆ ಬಾವಿಗಳನ್ನು ಕೃಷಿಗಾಗಿ, ಧಾರ್ಮಿಕ ಕಾರ್ಯಗಳಿಗಾಗಿ, ಕುಡಿಯುವ ನೀರಿಗಾಗಿ ಕಟ್ಟಿಸಲಾಗಿದೆ. ಸ್ಮಾರಕಶಿಲ್ಪಗಳ ಹಿನ್ನೆಲೆಯಲ್ಲಿ ವೀರಗಲ್ಲು, ಮಾಸ್ತಿಗಲ್ಲು, ವೀರಮಾಸ್ತಿಗಲ್ಲು, ತುರುಗೊಳ್ ವೀರಗಲ್ಲುಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಕಾನಾಮಡುಗಿನ ಮಾಸ್ತಿಗಲ್ಲುಗೆ ಆಚರಣೆ ಮತ್ತು ಉತ್ಸವ ಮಾಡುವುದು ಈ ಹೋಬಳಿ ಪರಿಸರದಲ್ಲಿ ವಿಶೇಷವಾಗಿದೆ. ಈ ಸ್ಮಾರಕಶಿಲ್ಪಗಳ ರಚನೆ, ವಿನ್ಯಾಸ, ಆಚರಣೆ, ನಂಬಿಕೆ, ಐತಿಹ್ಯವನ್ನು ಕುರಿತು ವಿವರಿಸಲಾಗಿದೆ. ಹಾಗೂ ಒಂದು ಅಪ್ರಕಟಿತ ವೀರಗಲ್ಲುನ್ನು ಗುರುತಿಸಲಾಗಿದೆ. ಅದರ ವಿವರಣೆ ನನ್ನ ಅಧ್ಯಯನದಲ್ಲಿ ನೀಡಲಾಗಿದೆ. ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಅಂಶಗಳನ್ನು ವಿವರವಾಗಿ ತಿಳಿಸಲಾಗಿದೆ.

ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಒಟ್ಟು ಏಳು ಶಾಸನಗಳು ಇದ್ದು ಅವುಗಳಲ್ಲಿ ಆರು ಪ್ರಕಟಿತವಾಗಿವೆ. ಒಂದು ಅಪ್ರಕಟಿತ ಶಾಸನವಾಗಿದೆ. ಇದನ್ನು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಾರಕಬಾವಿಯ ಚೌಡೇಶ್ವರಿ ದೇವಾಲಯದ ಗೋಪುರದ ಪಕ್ಕದಲ್ಲಿರುವುದನ್ನು ಶೋದಿಸಲಾಗಿದೆ. ಈ ಶಾಸನದಲ್ಲಿ ಸೂರ್ಯ ಚಂದ್ರ ಇದ್ದು ಲಿಪಿಯು ಅಸ್ಪಷ್ಟವಾಗಿದೆ. ಈ ಹೋಬಳಿ ಪರಿಸರದಲ್ಲಿ ಹೆಚ್ಚಾಗಿ ದಾನ ಶಾಸನಗಳಿವೆ.

ಒಟ್ಟಿನಲ್ಲಿ ಸಂಶೋಧನೆ ಎಂಬುದು ನಿಂತ ನೀರಲ್ಲ ನಿರಂತರವಾಗಿ ಸದಾಕಾಲ ಬದಲಾವಣೆಯಾಗುವುದು. ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಕ್ಷೇತ್ರವು ಸಾಗರದಷ್ಟು ವಿಸ್ತಾರವಾಗಿದೆ. ಎಲ್ಲಾ ಸಾಹಿತ್ಯಿಕ ಮತ್ತು ಪುರಾತತ್ವ ಆಕರಗಳನ್ನು ಒಂದೆಡೆ ಕಲೆಹಾಕಿ ಅಧ್ಯಯನಮಾಡಿದ್ದೇವೆಂದು ಹೇಳಿಕೊಳ್ಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಪ್ರತಿ ದಿನವೂ ಹೊಸ ಹೊಸ ವಿಷಯಗಳು ಬೆಳಕಿಗೆ ಬರುತ್ತಲೇ ಇವೆ. ಹೀಗಾಗಿ ಪರಿಪೂರ್ಣತೆ ಎನ್ನುವುದು ಆದರ್ಶವೇ ಹೊರತು ಪ್ರಾಯೋಗಿಕವಾಗಿ ಕಷ್ಟಸಾಧ್ಯದ ಸಂಗತಿಯಾಗಿದೆ. ಕಾನಾಹೊಸಹಳ್ಳಿ ಹೋಬಳಿ ಪರಿಸರದ ಪುರಾತತ್ವ ಅವಶೇಷಗಳನ್ನು ಪರಿಶೀಲಿಸಿ ಈ ಪರಿಸರದ ಶೈಲಿಯ ಇತಿಹಾಸ ಮತ್ತು ಪುರಾತತ್ವೀಯ ಅಂಶಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನವನ್ನು ಈ ಪ್ರೌಢ ಪ್ರಬಂಧದ ರಚನೆಯ ಮೂಲಕ ಮಾಡಲಾಗಿದೆ,

## ಅನುಬಂಧಗಳು

### ಪರಾಮರ್ಶನ ಗ್ರಂಥಗಳು

### ಪ್ರಾಥಮಿಕ ಆಕರಗಳು

### ಕನ್ನಡ ಆಕರಗಳು

ಅಂಬಳಿಕೆ ಹಿರಿಯಣ್ಣ (ಪ್ರ ಸಂ) ೨೦೦೯, ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ. ಮೈಸೂರು ವಿಶ್ವವಿದ್ಯಾಲಯ. ಮೈಸೂರು,

ಚನ್ನಬಸಪ್ಪ ಎಸ್, ಪಾಟೀಲ್ ಮತ್ತು ವಿನೋದ ಪಾಟೀಲ್ (ಸಂ) ೧೯೯೭, ಕರ್ನಾಟಕ ಶಾಸನಗಳ ಸಂ ೨, ಬಳ್ಳಾರಿ ಜಿಲ್ಲೆಯ ಶಾಸನಗಳು. ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಾಲಯಗಳು ನಿರ್ದೇಶನಾಲಯ ಮೈಸೂರು,

ಚನ್ನಬಸಪ್ಪ ಎಸ್, ಪಾಟೀಲ್ ಮತ್ತು ವಿನೋದ ಪಾಟೀಲ್ (ಸಂ)೧೯೯೫, ಕರ್ನಾಟಕದ ಶಾಸನಗಳು ಸಂ ೧. ಹಂಪಿಯ ಶಾಸನಗಳು. ಪ್ರಾಚ್ಯವಸ್ತು ಮತ್ತು ಸಂಗ್ರಾಲಯಗಳ ನಿರ್ದೇಶನಾಲಯ ಮೈಸೂರು,

ದೇವರಕೊಂಡ ರೆಡ್ಡಿ (ಸಂ) ಕಲವೀರ ಮನ್ವಾಚಾರ, ಭಟ್ಟಸೂರಿ ಕೆ.ಜಿ, ಪರಶಿವಮೂರ್ತಿ ಡಿ.ವಿ,(ಸ ಸಂ) ೧೯೯೮, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ ೧, ಬಳ್ಳಾರಿ ಜಿಲ್ಲೆ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ,

### ಇಂಗ್ಲೀಷ್ ಆಕರಗಳು

*Archaeological Surrevy of India 1922-25 Annual Riports on Indain Epigraphy.*

### ಅನುಷಂಗಿಕ ಆಕರಗಳು

ಅಪರ್ಣ ಕೊ. ಸ., ೧೯೯೯, ದೇವಾಲಯದ ವಾಸ್ತುಶಿಲ್ಪ ಪರಿಚಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

ಕೋಟ್ರೇಶ ಎಂ., ೨೦೧೧, ಬಳ್ಳಾರಿ ಜಿಲ್ಲೆಯ ಕೋಟೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಚಿದಾನಂದ ಮೂರ್ತಿ ಎಂ, ೧೯೭೫, ವೀರಗಲ್ಲುಗಳು ಮತ್ತು ಮಹಾಸತಿಗಲ್ಲುಗಳು, ಪಿ. ಬಿ. ಎಚ್ ಪ್ರಕಾಶನ, ಬೆಂಗಳೂರು,

ಚಂದ್ರಶೇಖರಯ್ಯ ಬಿ.ಎಂ., ೧೯೮೭, ಕೂಡ್ಲಿಗಿ ತಾಲೂಕು ದರ್ಶನ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

ತಿಪ್ಪೇರುದ್ರಸ್ವಾಮಿ ಎಚ್, ೧೯೭೪, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ ಮೂರ್ತಿ ಪ್ರಕಾಶನ ಮೈಸೂರು,

ಪ್ರಭಾಕರ ಎಂ.ಎನ್ ೨೦೧೧, ದೇವಾಲಯ ವಾಸ್ತು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ,

ಮಹದೇವ ಸಿ., ೨೦೦೦, ವಿಜಯನಗರದ ಗಾರೆಶಿಲ್ಪ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ,

ಮಹದೇವ ಸಿ., ೨೦೧೧, ಕರ್ನಾಟಕ ಪುರಾತತ್ವ ಶೋಧ, ಶ್ರೀಲಕ್ಷ್ಮೀ ಪ್ರಕಾಶನ, ಶ್ರೀರಂಗಪಟ್ಟಣ.

ರವಿಕುಮಾರ ಎನ್.ಎಂ., ಮತ್ತು ವೃಷಭೇಂದ್ರಚಾರ್ಯ ಎ., ೧೯೯೮, ಮುನ್ನಡೆಯ ಕೂಡ್ಲಿಗಿ, ಹಿಮಂತ ಪ್ರಕಾಶನ ಎಂ.ಬಿ.ಅಯ್ಯನಹಳ್ಳಿ.

ರಮೇಶ ನಾಯಕ (ಸಂ), ೨೦೦೭, ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳು ಮರುಚಿಂತನೆ, ಪ್ರಾಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ,

ರಾಮಚಂದ್ರರಾವ್ ಎಸ್.ಕೆ. ೧೯೭೫. ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು.

ವಾಸುದೇವನ್ ಸಿ.ಎಸ್, ೨೦೦೧, ಹಂಪಿ ಪರಿಸರದ ಕೆರೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

ವಾಸುದೇವನ್ ಸಿ.ಎಸ್., ೨೦೧೦, ಕರ್ನಾಟಕ ದೇವಾಲಯಕೋಶ ರಾಯಚೂರು ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

ವಾಸುದೇವ ಬಡಿಗೇರ, (ಸಂ), ೨೦೦೮, ಹಾನಗಲ್ಲು (ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೨) ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

ವಾಸುದೇವ ಬಡಿಗೇರ., ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಸ್ನೇಹಾ ಪ್ರಕಾಶನ ಬೆಂಗಳೂರು.

ವಿರುಪಾಕ್ಷ ಪೂಜಾರಹಳ್ಳಿ, ೨೦೦೬, ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ.

ಶಿವತಾರಕ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

ಶ್ರೀನಿವಾಸ ಎಲ್., ೨೦೧೦, ಹಂಪಿ ಪರಿಸರದ ಆದಿಮಾನವನ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

ಶ್ರೀನಿವಾಸ ಪಾಡಿಗಾರ, ೧೯೮೭, ಪುರಾತತ್ವ ಶಾಸ್ತ್ರ ಪರಿಚಯ, ಚೈತನ್ಯ ಪ್ರಕಾಶನ. ಧಾರವಾಡ

ಶೇಷಶಾಸ್ತ್ರಿ ಆರ್, ೨೦೦೪, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು,

ಶೇಠ ಬಿಎಸ್, ೧೯೯೧, ಕರ್ನಾಟಕದಲ್ಲಿ ಸತಿ ಪದ್ದತಿ, ವೀರಶೈವ ಅಧ್ಯಯನ ಅಕಾಡಮಿ ಶ್ರೀ ನಾಗನೂರು ರುದ್ರಾಕ್ಷಿಮಠ ಬೆಳಗಾವಿ,

ಶ್ರೀ ಕಂಠಶಾಸ್ತ್ರಿ, ೧೯೭೫, ಪುರಾತತ್ವ ಶೋಧನೆ, ಮೈಸೂರು ವಿಶ್ವವಿದ್ಯಾನಿಲಯ. ಮೈಸೂರು,

ಸುರೇಶ ಕೆ.ಎಂ., ವಾಸುದೇವ ಬಡಿಗೇರ, ಮೂಡಲಗೇರಿ ಕೊಟ್ರೇಶ, ಸೋಮಶೇಖರ ಎಸ್.ವೈ., ೧೯೯೯, ಕರ್ನಾಟಕ ದೇವಾಲಯಕೋಶ ಬಳ್ಳಾರಿ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

ಸೋಮಶೇಖರ ಎಸ್ ವೈ., (ಸಂ), ೨೦೧೦, ಬ್ರಹ್ಮಗಿರಿ (ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೩) ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ,

**ಲೇಖನಗಳು**

ವಿರೂಪಾಕ್ಷ ಪೂಜಾರಹಳ್ಳಿ, ೧೯೯೭, 'ಚಿನ್ನಹಗರಿ ನದಿ ಪರಿಸರದ ಪ್ರಾಚ್ಯವಶೇಷಗಳು ಒಂದು ಶೋಧನೆ', ಇ.ದ.ಸಂ-೧೨, ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು

ಅದೇ, ೨೦೦೦, ಹೂಡೇಂ ಗ್ರಾಮದ ಪ್ರಾಚ್ಯಾವಶೇಷಗಳು', ಇ.ದ.ಸಂ-೧೫, ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು

ಅದೇ, ೨೦೦೪, 'ಕರೆಪೂಜಾರಹಳ್ಳಿ ಕಟ್ಟಿಗೆನಹಳ್ಳಿ-ಚಾರಿತ್ರಿಕ ಅಧ್ಯಯನ', ಇ.ದ.ಸಂ-೧೬, ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು.

ತಿಪ್ಪೇಸ್ವಾಮಿ ಹೆಚ್., ೧೯೯೯, 'ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು, ಇ.ದ.ಸಂ-೧೪, ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು.

ಅದೇ, ೨೦೦೧ 'ಕೂಡ್ಲಿಗಿ ತಾಲೂಕಿನಲ್ಲಿ ಪ್ರಾಗಿತಿಹಾಸಿಕ ನೆಲೆಗಳು', ಇ.ದ.ಸಂ-೧೬, ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು.

ತಿಪ್ಪೇಶ ಎಚ್.ಎಂ., ೨೦೧೬, ಹುರುಳಿಹಾಳು ಮತ್ತು ಮಾಳೆಹಳ್ಳಿಯ ಬೃಹತ್ ಶಿಲಾಯುಗದ ಅವಶೇಷಗಳು, ಇ.ದ.ಸಂ-೩೧, ಕರ್ನಾಟಕ ಇತಿಹಾಸ ಅಕಾದೆಮಿ. ಬೆಂಗಳೂರು.

**ಪಿಹೆಚ್.ಡಿ ಮಹಾಪ್ರಬಂಧಗಳು**

ಕರಿಬಸಪ್ಪ ಎ., ೨೦೦೩, ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಜಯಣ್ಣ ಯು, ೨೦೦೨, ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಪದ್ಮಜಾ ದೇಸಾಯಿ, ೨೦೧೫, ಹಂಪಿ ಪರಿಸರದ ವೈಷ್ಣವಶಿಲ್ಪಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಮಂಜನಾಯ್ಕ.ಆರ್., ೨೦೧೮, ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳ ಪುರಾತತ್ವೀಯ ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

ಮೇಣಸಿಗಿ ಹೇಮಾವತಿ ಶಿವಾನಂದ, ೨೦೧೬, ಹಂಪಿ ಪರಿಸರದ ಶೈವಶಿಲ್ಪಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ.

**ಎಂ.ಫಿಲ್ ಪ್ರಬಂಧಗಳು**

ಲೋಕೇಶ ಜಿ.ಎಂ., ೨೦೧೦, ಚಿನ್ನಹಗರಿ ನದಿ ಪರಿಸರದ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಲೋಕೇಶ ಬಿ., ೨೦೧೫, ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ತಿಪ್ಪೇಶ ಹೆಚ್.ಎಂ., ೨೦೧೫ ಕೂಡ್ಲಿಗಿ ತಾಲೂಕಿನ ಬೃಹತ್ ಶಿಲಾಯುಗದ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಗೋವಿಂದಪ್ಪ ಜಿ, ೨೦೦೮, ಕೂಡ್ಲಿಗಿ ತಾಲೂಕಿನ ಶಾಸನಗಳು ಮತ್ತು ಸ್ಮಾರಕ ಶಿಲ್ಪಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ.

ವಿರೂಪಾಕ್ಷಪ್ಪ ಎಂ., ೨೦೧೮, ಕಾನಾಹೊಸಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ.

## ಕೋಷ್ಟಕ ೧ ದೇವಾಲಯಗಳು

| ಕ್ರ ಸಂ | ದೇವಾಲಯ ಹೆಸರು | ಊರು/ಸ್ಥಳ | ವಾಸ್ತುಶೈಲಿ | ಕಾಲ | ಪಂಥ | ಪ್ರಕಟಣೆ |
|---|---|---|---|---|---|---|
| ೦೧ | ಆಂಜನೇಯ | ಕಾನಾಹೊಸಹಳ್ಳಿ | ವಿಜಯನಗರೋತ್ತರ | ೧೮ ನೇ ಶತಮಾನ | ವೈಷ್ಣವ | |
| ೦೨ | ಆಂಜನೇಯ | ಕೆಂಚಮಲ್ಲನಹಳ್ಳಿ | ವಿಜಯನಗರೋತ್ತರ | ೧೭-೧೮ ನೇ ಶತಮಾನ | ವೈಷ್ಣವ | |
| ೦೩ | ಆಂಜನೇಯ | ರಂಗನಾಥನಹಳ್ಳಿ | ಆಧುನಿಕ ಶೈಲಿ | ೨೦ ನೇ ಶತಮಾನ | ವೈಷ್ಣವ | |
| ೦೪ | ಈಶ್ವರ | ಕೆಂಚಮಲ್ಲನಹಳ್ಳಿ | ವಿಜಯನಗರೋತ್ತರ | ೧೯ ನೇ ಶತಮಾನ | ಶೈವ | ಕ.ದೇ.ಕೋ |
| ೦೫ | ಈಶ್ವರ | ಬಣವಿ ಕಲ್ಲು | ವಿಜಯನಗರೋತ್ತರ | ೧೭ನೇ ಶತಮಾನ | ಶೈವ | ಕ.ದೇ.ಕೋ |
| ೦೬ | ಈಶ್ವರ | ಹೂಡೇಂ | ಕಲ್ಯಾಣ ಚಲುಕ್ಯರು | ೧೨-೧೩ ಶತಮಾನ | ಶೈವ | |
| ೦೭ | ಈಶ್ವರ | ಕುಮತಿ | ಪಾಳೆಯಗಾರರ ಶೈಲಿ | ೧೯ನೇ ಶತಮಾನ | ಶೈವ | |
| ೦೮ | ಕಲ್ಲೇಶ್ವರ | ಕಾನಾಹೊಸಹಳ್ಳಿ | ವಿಜಯನಗರೋತ್ತರ | ೧೭-೧೮ ನೇ ಶತಮಾನ | ಶೈವ | |
| ೦೯ | ಕಲ್ಲೇಶ್ವರ | ಹುಲಿಕೆರೆ | ಕಲ್ಯಾಣ ಚಲುಕ್ಯರು | ೧೩ನೇ ಶತಮಾನ | ಶೈವ | ಕ.ದೇ.ಕೋ |
| ೧೦ | ಕಲ್ಲೇಶ್ವರ | ತೊರೆಕಲ್ಲಹಳ್ಳಿ | ಕಲ್ಯಾಣ ಚಲುಕ್ಯರು | ೧೨ ನೇ ಶತಮಾನ | ಶೈವ | ಕ.ದೇ.ಕೋ |
| ೧೧ | ಕಲ್ಲೇಶ್ವರ | ಪೂಜಾರಹಳ್ಳಿ | ಕಲ್ಯಾಣ ಚಲುಕ್ಯರು | ೧೩ನೇ ಶತಮಾನ | ಶೈವ | ಕ.ದೇ.ಕೋ |
| ೧೨ | ಚೌಡೇಶ್ವರಿ | ಹಾರಕ್‌ಬಾವಿ | ಆಧುನಿಕ ಶೈಲಿ | ೧೮ ನೇಶತಮಾನ | ಶಾಕ್ತ | ಕ.ದೇ.ಕೋ |
| ೧೩ | ಚೌಡೇಶ್ವರಿ | ಹೂಡೇಂ | ಆಧುನಿಕ ಶೈಲಿ | ೧೯ ನೇ ಶತಮಾನ | ಶಾಕ್ತ | |
| ೧೪ | ಬಸವಣ್ಣ | ಕಾನಾಹೊಸಹಳ್ಳಿ | ಪಾಳೆಯಗಾರರ ಶೈಲಿ | ೧೯ನೇ ಶತಮಾನ | ಶೈವ | |
| ೧೫ | ಬಸವೇಶ್ವರ | ಪೂಜಾರಹಳ್ಳಿ | ವಿಜಯನಗರೋತ್ತರ | ೧೯ನೇ ಶತಮಾನ | ಶೈವ | ಕ.ದೇ.ಕೋ |
| ೧೬ | ಬಸವೇಶ್ವರ | ಕನ್ಯಾಬೋರಯ್ಯ ನಹಟ್ಟಿ | ವಿಜಯನಗರೋತ್ತರ | ೧೭-೧೮ನೇ ಶತಮಾನ | ಶೈವ | |
| ೧೭ | ಬಸವೇಶ್ವರ | ರಂಗನಾಥನಹಳ್ಳಿ | ಆಧುನಿಕ ಶೈಲಿ | ೨೦ನೇ ಶತಮಾನ | ಶೈವ | |
| ೧೮ | ಬಸವೇಶ್ವರ | ಬಯಲು ತುಂಬರಗುದ್ದಿ | ವಿಜಯನಗರೋತ್ತರ | ೧೭ನೇ ಶತಮಾನ | ಶೈವ | |
| ೧೯ | ಬೀರಲಿಂಗೇಶ್ವರ | ಕಾನಾಹೊಸಹಳ್ಳಿ | ಪಾಳೆಯಗಾರರ ಶೈಲಿ | ೧೯ನೇ ಶತಮಾನ | ಶೈವ | |
| ೨೦ | ಬೋರೆದೇವರ ಗುಡಿ | ಹೂಡೇಂ | ಪಾಳೆಯಗಾರರ ಶೈಲಿ | ೧೯ನೇ ಶತಮಾನ | ಶೈವ | |
| ೨೧ | ಮಾರಮ್ಮ | ಕಾನಾಹೊಸಹಳ್ಳಿ | ಆಧುನಿಕ ಶೈಲಿ | ೨೦ ನೇ ಶತಮಾನ | ಶಾಕ್ತ | |
| ೨೨ | ಮೈಲಾರಲಿಂಗೇಶ್ವರ | ಕೆಂಚಮಲ್ಲನಹಳ್ಳಿ | ಆಧುನಿಕ ಶೈಲಿ | ೧೯ನೇ ಶತಮಾನ | ಶೈವ | |
| ೨೩ | ವೀರಭದ್ರ | ಸುಣ್ಣಮರಡಿ | ವಿಜಯನಗರೋತ್ತರ | ೧೭ನೇ ಶತಮಾನ | ಶೈವ | |
| ೨೪ | ಶರಣಬಸವೇಶ್ವರ | ಕಾನಾಮಡುಗು | ವಿಜಯನಗರೋತ್ತರ | ೧೮ನೇಶತಮಾನ | ಶೈವ | ಕ.ದೇ.ಕೋ |
| ೨೫ | ಶರಣಬಸವೇಶ್ವರ | ಕುಮತಿ | ವಿಜಯನಗರೋತ್ತರ | ೧೭ನೇ ಶತಮಾನ | ಶೈವ | |
| ೨೬ | ಸಂಗಮೇಶ್ವರ | ಇಮ್ಮಡಾಪುರ | ಆಧುನಿಕ ಶೈಲಿ | ೨೦ನೇ ಶತಮಾನ | ಶೈವ | |
| ೨೭ | ಸಿದ್ಧಲಿಂಗೇಶ್ವರ | ಕುಮತಿ | ವಿಜಯನಗರೋತ್ತರ | ೧೭ ನೇ ಶತಮಾನ | ಶೈವ | |
| ೨೮ | ಸಿದ್ಧಲಿಂಗೇಶ್ವರ ಹೊರ ಮಠ | ಕುಮತಿ | ಪಾಳೆಯಗಾರರ ಶೈಲಿ | ೧೯ನೇ ಶತಮಾನ | ಶೈವ | |

ಕ.ದೇ.ಕೋ- ಕರ್ನಾಟಕ ದೇವಾಲಯಕೋಶ

## ಕೋಷ್ಟಕ ೨ ಮೂರ್ತಿಶಿಲ್ಪಗಳು

| ಕ್ರ ಸಂ | ಮೂರ್ತಿಶಿಲ್ಪದ ಹೆಸರು | ದೊರೆತ ಸ್ಥಳ | ಸ್ಥಿತಿ | ಸ್ಮಾರಕದ ಕಾಲ | ಪಂಥ |
|---|---|---|---|---|---|
| ೦೧ | ಶಿವಲಿಂಗ | ಕಾನಾಹೊಸಹಳ್ಳಿ | ಉತ್ತಮ | ಕಲ್ಯಾಣ ಚಲುಕ್ಯರು | ಶೈವ |
| ೦೨ | ಶಿವಲಿಂಗ | ಕಲ್ಲಹಳ್ಳಿ | ಉತ್ತಮ | ಕಲ್ಯಾಣ ಚಲುಕ್ಯರು | ಶೈವ |
| ೦೩ | ನಂದಿ | ಹುಲಿಕೆರೆ | ಉತ್ತಮ | ಕಲ್ಯಾಣ ಚಲುಕ್ಯರು | ಶೈವ |
| ೦೪ | ನಂದಿ | ಕಾನಾಹೊಸಹಳ್ಳಿ | ಉತ್ತಮ | ಕಲ್ಯಾಣ ಚಲುಕ್ಯರು | ಶೈವ |
| ೦೫ | ನಂದಿ | ಕೆಂಚಮಲ್ಲನಹಳ್ಳಿ | ಸಾಧರಣ | ವಿಜಯನಗರೋತ್ತರ | ಶೈವ |
| ೦೬ | ಗಣಪತಿ | ಹುಲಿಕೆರೆ | ಉತ್ತಮ | ಕಲ್ಯಾಣ ಚಲುಕ್ಯರು | ಶೈವ |
| ೦೭ | ಭೈರವ | ಹುಲಿಕೆರೆ | ಉತ್ತಮ | ಕಲ್ಯಾಣ ಚಲುಕ್ಯರು | ಶೈವ |
| ೦೮ | ಭೈರವ | ಹುಲಿಕೆರೆ | ಉತ್ತಮ | ಕಲ್ಯಾಣ ಚಲುಕ್ಯರು | ಶೈವ |
| ೦೯ | ಭೈರವ | ಹೂಡೇಂ | ಉತ್ತಮ | ಪಾಳೆಯಗಾರರು | ಶೈವ |
| ೧೦ | ಸೂರ್ಯ | ಹೂಡೇಂ | ಸಾಧರಣ | ಪಾಳೆಯಗಾರರು | ಶೈವ |
| ೧೧ | ವಿಷ್ಣು | ಹೂಡೇಂ | ಸಾಧರಣ | ಪಾಳೆಯಗಾರರು | ವೈಷ್ಣವ |
| ೧೨ | ವಿಷ್ಣು | ಹುಲಿಕೆರೆ | ಉತ್ತಮ | ಕಲ್ಯಾಣ ಚಲುಕ್ಯರು | ವೈಷ್ಣವ |
| ೧೩ | ಕೇಶವ | ಹುಲಿಕೆರೆ | ಉತ್ತಮ | ಕಲ್ಯಾಣ ಚಲುಕ್ಯರು | ವೈಷ್ಣವ |
| ೧೪ | ಆಂಜನೇಯ | ಕೆಂಚಮಲ್ಲನಹಳ್ಳಿ | ಉತ್ತಮ | ವಿಜಯನಗರೋತ್ತರ | ವೈಷ್ಣವ |
| ೧೫ | ಆಂಜನೇಯ | ಕಾನಾಹೊಸಹಳ್ಳಿ | ಸಾಧರಣ | ವಿಜಯನಗರೋತ್ತರ | ವೈಷ್ಣವ |
| ೧೬ | ಆಂಜನೇಯ | ಪೂಜಾರಹಳ್ಳಿ | ಉತ್ತಮ | ವಿಜಯನಗರೋತ್ತರ | ವೈಷ್ಣವ |
| ೧೭ | ಜಿನ | ಹೂಡೇಂ | ಸಾಧರಣ | ಪಾಳೆಯಗಾರರು | ಜೈನ |
| ೧೮ | ಗಜಲಕ್ಷ್ಮೀ | ಕೆಂಚಮಲ್ಲನಹಳ್ಳಿ | ಸಾಧರಣ | ವಿಜಯನಗರೋತ್ತರ | ಶಾಕ್ತ |

## ಕೋಷ್ಟಕ ೩. ಸ್ಮಾರಕ ಶಿಲ್ಪಗಳು

| ಕ್ರ ಸಂ | ಸ್ಮಾರಕ ಶಿಲ್ಪ | ದೊರೆಯುವ ಸ್ಥಳ | ಅರಸು ಮನೆತನ |
|---|---|---|---|
| ೦೧ | ಮಹಾಸತಿಗಲ್ಲು | ಕಾನಾಮಡುಗು ಗ್ರಾಮದ ಬೇವಿನ ಕಟ್ಟೆಯ ಮೇಲೆ | ಕಲ್ಯಾಣ ಚಲುಕ್ಯರು |
| ೦೨ | ವೀರಮಾಸ್ತಿಗಲ್ಲು | ಕಾನಾಮಡುಗು ಗ್ರಾಮದ ಬೇವಿನ ಕಟ್ಟೆಯ ಪಕ್ಕದಲ್ಲಿ | ಕಲ್ಯಾಣ ಚಲುಕ್ಯರು |
| ೦೩ | ವೀರಮಾಸ್ತಿಗಲ್ಲು | ಕಾನಾಮಡುಗು ಗ್ರಾಮದ ಬೇವಿನ ಕಟ್ಟೆಯ ಕೆಳಗೆ | ಕಲ್ಯಾಣ ಚಲುಕ್ಯರು |
| ೦೪ | ವೀರಮಹಾಸತಿಗಲ್ಲು | ಪೂಜಾರಹಳ್ಳಿ ಕರಿ ಬೋರಯ್ಯನ ಮಡುವು ಹತ್ತಿರ | ವಿಜಯನಗರ ಅರಸರು |
| ೦೫ | ವೀರಮಹಾಸತಿಗಲ್ಲು | ತಾಯಕನಹಳ್ಳಿ ತಿಪ್ಪೇಸ್ವಾಮಿಯ ಹೊಲದಲ್ಲಿ | ವಿಜಯನಗರ ಆರಂಭ |
| ೦೬ | ವೀರಗಲ್ಲು | ಕಾನಾಹೊಸಹಳ್ಳಿ ಕಲ್ಲೇಶ್ವರ ದೇವಾಲಯದಲ್ಲಿ | ಕಲ್ಯಾಣ ಚಲುಕ್ಯರು |
| ೦೭ | ವೀರಗಲ್ಲು | ಹುಲಿಕೆರೆ ಕಲ್ಲೇಶ್ವರ ದೇವಾಲಯದ ಒಳಭಾಗದಲ್ಲಿ | ಕಲ್ಯಾಣ ಚಾಲುಕ್ಯರು |
| ೦೮ | ವೀರಗಲ್ಲು | ತಿಪ್ಪೇಹಳ್ಳಿ ಮಟ್ಟಿಯ ಮೇಲೆ | ವಿಜಯನಗರೋತ್ತರ |
| ೦೯ | ವೀರಗಲ್ಲು | ಕುಮತಿ ಸಿದ್ಧೇಶ್ವರ ದೇವಾಲಯದ ಮುಂಭಾಗದಲ್ಲಿ | ವಿಜಯನಗರೋತ್ತರ |
| ೧೦ | ತುರುಗೋಳ್ ವೀರಗಲ್ಲು | ಹುಲಿಕೆರೆ ಕಲ್ಲೇಶ್ವರ ದೇವಾಲಯದ ಹೊರ ಭಾಗದಲ್ಲಿ | ಕಲ್ಯಾಣ ಚಲುಕ್ಯರು |
| ೧೧ | ತುರುಗೋಳ್ ವೀರಗಲ್ಲು | ಕುಮತಿ ಸಿದ್ಧಲಿಂಗೇಶ್ವರ ಹೊರಮಠದ ಮುಂಭಾಗದಲ್ಲಿ | ಕಲ್ಯಾಣ ಚಲುಕ್ಯರು |

## ಕೋಷ್ಟಕ ೪ ಶಾಸನಗಳು

| ಕ್ರ ಸಂ | ರಾಜವಂಶ | ಅರಸ | ಶಾಸನ ಇರುವ ಸ್ಥಳ | ಕಾಲಮಾನ | ಪ್ರಕಟಣೆ |
|---|---|---|---|---|---|
| ೦೧ | ಹೊಯ್ಸಳರು | ವೀರನರಸಿಂಹದೇವ | ದೊಂಬರಹಳ್ಳಿ ಆಲದ ಮರದ ಕೆಳಗೆ | ಧಾತು ಆಶ್ವಯುಜ | ಆ ರಿ ಸೌ ಇ ಎ ೧೯೨೪-೨೫ |
| ೦೨ | ಹೊಯ್ಸಳರು | ವೀರನರಸಿಂಹದೇವ | ಹುರುಳಿ ಹಾಳು ಗ್ರಾಮದ ನೈರುತ್ಯಕ್ಕೆ | ಧಾತು ಆಶ್ವಯುಜ | ಆ ರಿ ಸೌ ಇ ಎ ೧೯೨೪-೨೫ |
| ೦೩ | ಹೊಯ್ಸಳರು | ವೀರನರಸಿಂಹದೇವ | ಕಾತ್ರಿಕೆಹಟ್ಟಿ ಬಾವಿ ಹತ್ತಿರ | ಧಾತು ಅಶ್ವಯುಜ | ಆ ರಿ ಸೌ ಇ ಎ ೧೯೨೪-೨೫ |
| ೦೪ | ಹೊಯ್ಸಳರು | ವೀರನರಸಿಂಹದೇವ | ಲೋಕಿಕೆರೆ ಕೆರೆ ಏರಿಯ ಹಿಂಭಾಗದಲ್ಲಿ | ೧೩ನೇ ಶತಮಾನ | ಆ ರಿ ಸೌ ಇ ಎ ೧೯೨೪-೨೫ |
| ೦೫ | ಹೊಯ್ಸಳರು | ವೀರನರಸಿಂಹದೇವ | ಮಾಲೆನೂರು ಗ್ರಾಮದ ಪ್ರವೇಶ ದ್ವಾರದಲ್ಲಿರುವ ಕಲ್ಲಿನ ಮೇಲೆ | ಧಾತು ಆಶ್ವಯುಜ | ಆ ರಿ ಸೌ ಇ ಎ ೧೯೨೪-೨೫ |
| ೦೬ | ಪಾಳೆಯಗಾರರು | | ಹೂಡೇಂ ಬೋರಪ್ಪನ ಹೊಲದಲ್ಲಿ | ೦೫-೦೫-೧೭೧೨ | ಕ.ವಿ.ವಿ ಶಾ ಸಂ ೨ |
| ೦೭ | | | ಹಾರಕಬಾವಿ ಚೌಡೇಶ್ವರಿ ದೇವಾಲಯದ ಪಕ್ಕದಲ್ಲಿ | | ಅಪ್ರಕಟಿತ |

## ತಲನಕ್ಷೆಗಳು

### ಕಲ್ಲಹಳ್ಳಿಯ ಕಲ್ಲೇಶ್ವರ ದೇವಾಲಯದ ತಲನಕ್ಷೆ







* ಅಳತೆಗೆ ಅನುಗುಣವಾಗಿಲ್ಲ

## ಹುಲಿಕೆರೆ ಕಲ್ಲೇಶ್ವರ ದೇವಾಲಯದ ತಲನಕ್ಷೆ







* ಅಳತೆಗೆ ಅನುಗುಣವಾಗಿಲ್ಲ

# ಪೈ ನಕ್ಷೆಗಳು

**Temples**




**Temples**






ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಕಂಡುಬರುವ ದೇವಾಲಯಗಳ ಪಂಥವನ್ನು ತೋರಿಸುವ ಶೇಕಡವಾರು ಪೈ ನಕ್ಷೆ




ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಕಂಡುಬರುವ ದೇವಾಲಯಗಳ ವಾಸ್ತುಶೈಲಿಯನ್ನು ತೋರಿಸುವ ಶೇಕಡವಾರು ಪೈ ನಕ್ಷೆ.




ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಕಂಡುಬರುವ ದೇವಾಲಯಗಳ ಕಾಲಮಾನವನ್ನು ತೋರಿಸುವ ಪೈ ನಕ್ಷೆ.






ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಕಂಡುಬರುವ ಮೂರ್ತಿಶಿಲ್ಪಗಳ ಶೇಕಡವಾರು ಪೈ ನಕ್ಷೆ.




ಕಾನಾಹೊಸಹಳ್ಳಿ ಹೋಬಳಿ ಪರಿಸರದಲ್ಲಿ ಕಂಡುಬರುವ ಸ್ಮಾರಕ ಶಿಲ್ಪಗಳ ಶೇಕಡವಾರು ಪೈ ನಕ್ಷೆ.

# ಛಾಯಾಚಿತ್ರಗಳು



ಶರಣಬಸವೇಶ್ವರ ದೇವಾಲಯದ ಮುಂಭಾಗ
ಕಾನಾಮಡುಗು



ಶರಣಬಸವೇಶ್ವರ ದೇವಾಲಯದ
ಪಾರ್ಶ್ವನೋಟ ಕಾನಾಮಡುಗು



ಕಲ್ಲೇಶ್ವರ ದೇವಾಲಯ ಹುಲಿಕೆರೆ







ಕಲ್ಲೇಶ್ವರ ದೇವಾಲಯದ ಗರ್ಭಗೃಹದಲ್ಲಿರುವ ಬೈರವ, ಶಿವಲಿಂಗ ಮತ್ತು ವಿಷ್ಣು ಶಿಲ್ಪಗಳು



ಕಲ್ಲೇಶ್ವರ ದೇವಾಲಯ ತೊರೆ ಕಲ್ಲಹಳ್ಳಿ




ದೇವಸ್ಥಾನ ಬಣವಿಕಲ್ಲು




ಕಲ್ಲಹಳ್ಳಿಯಲ್ಲಿ ದೊರೆತ ನವಶಿಲಾಯುಗದ ಮಡಿಕೆ ಚೂರುಗಳು




ತಿಪ್ಪೇಹಳ್ಳಿಯಲ್ಲಿ ದೊರೆತಿರುವ ಕಪ್ಪು ಮಡಿಕೆ ಚೂರುಗಳು





ಕಲ್ಲಹಳ್ಳಿಯಲ್ಲಿ ಕಂಡುಬರುವ ನವಶಿಲಾಯುಗದ ಮಡಿಕೆ ಚೂರುಗಳು ಮತ್ತು ಬೂದಿಕಿಟ್ಟ



ಮಾನವಶಿಲಾಗೋರಿ ಕುಮತಿ



ಚಿನ್ನಹಗರಿ ನದಿಯು ಹರಿವಿನ ನೋಟ ಕಲ್ಲಹಳ್ಳಿ



ತುರುಗೋಳ್ ವೀರಗಲ್ಲು ಹುಲಿಕೆರೆ



ವೀರಮಹಾಸತಿಗಲ್ಲು ತಾಯಕನಹಳ್ಳಿ



ಮಹಾಸತಿಗಲ್ಲು ಕಾನಾಮಡುಗು



ಜೇನ ಸೂರ್ಯ ಮತ್ತು ಬೈರವ ಶಿಲ್ಪಗಳು ಹೂಡೇಂ




ಲೋಕಿಕೆರೆಯ ಶಾಸನ ಮತ್ತು ಹಾರಕಬಾವಿ ಗ್ರಾಮದಲ್ಲಿರುವ ಚೌಡೇಶ್ವರಿ ದೇವಾಲಯದ ಮುಂಭಾಗದಲ್ಲಿರುವ ಶಾಸನ



ತುರುಗೋಳ್ ವೀರಗಲ್ಲು ಕುಮತಿ



ನಂದಿ ಶಿಲ್ಪ ಕೆಂಚಮಲ್ಲನಹಳ್ಳಿ




ಕಪಿಲಿಬಾವಿ ಮತ್ತು ಕಾಲುವೆ ಕಲ್ಲಹಳ್ಳಿ



ಹುಲಿಕೆರೆಯ ತೂಬೂ



ತಿಪ್ಪೇಹಳ್ಳಿಯ ಗ್ರಾಮದ ಹಾಳೂರಿನಲ್ಲಿರುವ ಬಾವಿ



ಕಾನಾಮಡುಗು ಮಠದ ಹಿಂಭಾಗದಲ್ಲಿರುವ ಬಾವಿ



ಆಂಜನೇಯ ಶಿಲ್ಪ ಪೂಜಾರಹಳ್ಳಿ

